## ಪಕ್ಷ: ಗರಿಮುರಿ, ತಾಜಾ ಹಾಗೂ ಜನಪ್ರಿಯವಾಗಿರುವುದರಿಂದ ಪಾರ್ಲೆ ಬಿಸ್ಕಿಟ್‌ಗಳನ್ನು ನಕಲು ಮಾಡುವವರು ಅನೇಕರಿದ್ದಾರೆ.

ಸಾಧ್ಯ : ಒಂದು ಬಿಸ್ಕಿಟನ್ನು ಪಾರ್ಲೆ ಬಿಸ್ಕಿಟನಂತೆ ಕಾಣುವ ಹಾಗೆ ಮಾಡಬಹುದು, ಆದರೆ ಅದಕ್ಕೆ ಪಾರ್ಲೆ ಬಿಸ್ಕಿಟನ ರುಚಿ ಕೊಡಲು ಸಾಧ್ಯವಿಲ್ಲ.

ಸಿದ್ಧತೆ : ಅ) ಕೊಂಡುಕೊಳ್ಳುವ ಪರೀಕ್ಷೆ :
ನೆನಪಿನಲ್ಲಿಟ್ಟುಕೊಳ್ಳತಕ್ಕ ಮೊದಲನೆಯ ಸಂಗತಿ: ಪಾರ್ಲೆ ಮೊನೆಕೊ ಬಿಸ್ಕಿಟುಗಳು ಬಿಡಿಯಾಗಿ ಎಂದೂ ಮಾರಲ್ಪಡುವುದಿಲ್ಲ. ಅವು ಆರೋಗ್ಯ ಸೂತ್ರಗಳಿಗನುಸಾರವಾಗಿ ಸುರುಳಿಗಳಲ್ಲಿ, ಚೌಕಾಕಾರದ ಕಾರ್ಟನ್‌ಗಳಲ್ಲಿ ಮತ್ತು ಟಿನ್‌ಗಳಲ್ಲಿ ಪ್ಯಾಕ್ ಮಾಡಲ್ಪಟ್ಟು ದೊರೆಯುತ್ತವೆ-ಅವುಗಳ ಅನುಪಮ ತಾಜಾತನವನ್ನು ಉಳಿಸಿಡುವುದಕ್ಕಾಗಿ.

ಆ) ಪ್ಯಾಕೇಜ್ ಪರೀಕ್ಷೆ :
ಯಾವುದೇ ಶೆಲ್ಫ್‌ನಲ್ಲಿ ಇಟ್ಟಿರುವ, ಆಕರ್ಷಕವಾದ ಪಾರ್ಲೆ ಮೊನೆಕೊ ಪ್ಯಾಕ್‌ನ್ನು ಗುರುತಿಸುವುದು ಸುಲಭ. ಇಮ್ಮಡಿ ಖಾತ್ರಿಮಾಡಿಕೊಳ್ಳುವುದಕ್ಕಾಗಿ ಪ್ಯಾಕ್‌ನ ಮೇಲಿರುವ P-A-R-L-E (ಪಾರ್ಲೆ) ಹೆಸರನ್ನು ಪರೀಕ್ಷಿಸಿ ನೋಡಿರಿ.

ಇ) ರುಚಿಯ ಪರೀಕ್ಷೆ :
ಬಿಸ್ಕಿಟನ್ನು ತಿಂದುನೋಡಿರಿ. ಅದು ಗರಿಮುರಿಯಾಗಿ, ಪರೆಪರೆಯಾಗಿ ಇದ್ದರೆ ಅದು ಅಪ್ಪಟ ಪಾರ್ಲೆ ಮೊನೆಕೊ ಎಂದು ನೀವು ಖಾತ್ರಿಯಾಗಿರಬಹುದು.

ಇತಿ ಸಿದ್ಧಂ:




**ಒಂದಕ್ಕಿಂತ ಒಂದು ರುಚಿಕರ, ಸಂತೃಪ್ತಿಯ ಶಿಖರ.**

**Results of Chandamama—Camlin Colouring Contest No. 12 (Kannada)**

*1st Prize:* S. N. Simha, Mysore. *2nd Prize:* Rajesh K. Bhat Kumta. *3rd Prize:* Ramachandra Badiger, Dharwad. *Consolation Prizes:* D. K. Simha, Hyderabad. Ramchandra N. Bandekar, Nandangoa. Srinivas K. Purohit, Harihar. S. Gururaja Rao, Sagar. Ravi V. Halijola, Hubli.




# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'
ಸಂಚಾಲಕರು: ನಾಗಿರೆಡ್ಡಿ

ಯಾವ ಕಾಲದಲ್ಲಾದರೂ ಎಂತಹ ಪರಿಸ್ಥಿತಿಯಲ್ಲಾದರೂ ಮನುಷ್ಯರು ಪಾಲಿಸತಕ್ಕ ಧರ್ಮಗಳಲ್ಲಿ ಕೂಡಾ ಘರ್ಷಣೆಯುಂಟಾಗುತ್ತದೆ. ಆಗ ಸರಿಯಾದ ಧರ್ಮವನ್ನು ತಿಳಿಯಲು ಧರ್ಮದ ಸೂಕ್ಷ್ಮವನ್ನು ತಿಳಿಯ ಬೇಕಾಗುತ್ತದೆ. ಇದನ್ನು "ಪಿತೃ ವಾಕ್ಯಪಾಲನೆ" ಬೇತಾಳ ಕಥೆಯೂ, ದಾನದಲ್ಲಿಯ ಧರ್ಮ ಸೂಕ್ಷ್ಮವನ್ನು "ದುಷ್ಟ ಧನದ ದಾನ" ಚಿತ್ರ ಕಥೆಯೂ ತಿಳಿಸುತ್ತದೆ. ಕೊಂದ ತಾಯಿಯನ್ನು ಬದುಕಿಸಿಕೊಳ್ಳುವೆನೆಂಬ ಧೈರ್ಯವಿದ್ದವನು "ಪರಶುರಾಮ". ಇವನ ಪಿತೃವಾಕ್ಯಪಾಲನೆ ವಿಶೇಷ ಧರ್ಮಪಾಲನೆಯೆನಿಸಿದೆ.

## ಅಮರವಾಣಿ

ನಮಂತಿ ಫಲಿತಾ ವೃಕ್ಷಾಃ ನಮಂತಿ ಚ ಬುಧಾ ಜನಾಃ
ಶುಷ್ಕ ಕಾಷ್ಠಾನಿ ಮೂರ್ಖಾಶ್ಚಭಿದ್ಯಂತೇ ನ ನಮಂತಿ ಚ ||

ಫಲಿಸುವ ಮರಗಳೂ ಬುದ್ಧಿವಂತರೂ ನಮ್ರರಾಗಿ ಬಾಗುವರು. ಒಣ ಕಟ್ಟಿಗೆಗಳೂ, ಮೂರ್ಖರೂ ಮುರಿದು ಹೋಗುವರೇ ಹೊರತು ಬಾಗರು.

ಸಂಪುಟ: ೬೪ ಮಾರ್ಚ್ '೮೦ ಸಂಚಿಕೆ: ೩

ಬಿಡಿ ಪ್ರತಿ ರೂ: ೧-೫೦ : : ವಾರ್ಷಿಕ ಚಂದಾ ರೂ. ೧೮-೦೦




**ಲಕ್ಷ್ಮಣ, ಹಳ್ಳೂರ ( ಕರ್ನಾಟಕ )**

ಪ್ರ: ಅಶೋಕನೂ ಕನಿಷ್ಕನೂ ಭಾರತದೇಶದ ಎಲ್ಲಾ ಪ್ರಾಂತಗಳಲ್ಲಿಯೂ ಬೌದ್ಧಮತವನ್ನು ಪ್ರಚಾರ ಮಾಡಿದರು. ಆದರೆ ಭಾರತದಲ್ಲಿ ಬೌದ್ಧಮತ ಕ್ಷೀಣವಾಯಿತೇಕೆ ? ಜೈನಮತವು ಯಾವುದರಿಂದ ಉಳಿದು ಕೊಂಡಿದೆ ?

ಉ: ಬೌದ್ಧವು ಚಕ್ರವರ್ತಿತ್ವಕ್ಕೆ ಅನುಕೂಲವಾದ ಮತವೆಂದು ಹೇಳುತ್ತಾರೆ, ಸಾಮ್ರಾಜ್ಯಗಳನ್ನು ಸ್ಥಾಪಿಸಿದ ಮಗಧ ರಾಜರು, ತಾವು ಸ್ವಯಂ ಬೌದ್ಧ ಮತವನ್ನು ಹೊಂದಿದ್ದರೂ, ಇಲ್ಲದೆ ಹೋಗಿದ್ದರೂ ಬೌದ್ಧವನ್ನು ಆದರಿಸಿ ಪ್ರೋತ್ಸಾಹಿಸಿದರು. ಬೌದ್ಧವು ಹಿಂಸೆಯ ಗೊಡವೆ ಇಲ್ಲದೆಯೇ ಸಾಮ್ರಾಜ್ಯವನ್ನು ನೆಲೆಗೊಳಿಸ ಬಲ್ಲುದೆಂದು ಅಶೋಕನು ತನ್ನ ಕಾಲದಲ್ಲಿ ನಿರೂಪಿಸಿದನು. ಅಹಿಂಸೆಯ ಮೂಲಕ ಪ್ರಚಾರವಾದ ಪ್ರಪಂಚ ವ್ಯಾಪ್ತವಾದ ಮತವು ಬುದ್ಧ ಮತದ ಹೊರತು ಬೇರೊಂದಿಲ್ಲ. ಸಾಮ್ರಾಜ್ಯಗಳು ಹೋಗಿ ಪ್ರಾಂತೀಯ ರಾಜ್ಯಗಳು ಬೆಳಗಿದ ಮೇಲೆ ಬೌದ್ಧವು ನಮ್ಮ ದೇಶದಲ್ಲಿ ಅಂತರಿಸಿತು. ವರ್ಣ ವ್ಯವಸ್ಥೆಯಲ್ಲಿ ರಾಜಿಯಾಗದೆ ಹೋದ ಕಾರಣದಿಂದ ಬೌದ್ಧವು ಈ ದೇಶದಲ್ಲಿ ನಿಲ್ಲಲಾಗದೆ ಹೋಯಿತು. ಜೈನವು ರಾಜಿಗೆ ಬಂದುದರಿಂದಲೇ ನಿಂತಿದೆಯೆಂದು ಹೇಳಬಹುದು. ಆದುದರಿಂದಲೇ ಜೈನವು ದೇಶಾಂತರಗಳಲ್ಲಿ ವ್ಯಾಪಿಸ ಲಿಲ್ಲವೆಂದು ಹೇಳುತ್ತಾರೆ.

**ಬಿ. ನಾರಾಯಣ, ಚೀಪುರುಪಲ್ಲಿ ( ಆಂಧ್ರ )**

ಪ್ರ: ಉದಯಿಸುವ ಅಥವಾ ಅಸ್ತಮಿಸುವ ಸೂರ್ಯನು ಕೆಂಪಗಿರುತ್ತಾನೆ, ಹಾಗೆಯೇ ಉದಯಿಸುವ ಅಥವಾ ಅಸ್ತಮಿಸುವ ಚಂದ್ರನೂ ಕೆಂಪಗಿರುತ್ತಾನೆ. ಹಾಗೆ ಕಾಣಲು ಕಾರಣವೇನೆಂದು ಹೇಳುವಿರಾ ?

ಉ: ಉದಯಿಸುವ ಸೂರ್ಯಚಂದ್ರರ ಕಾಂತಿ ಕಿರಣಗಳು ಭೂಮಿಯನ್ನು ತಲಪುವುದಕ್ಕೆ ಭೂಮಿಯ ಸುತ್ತಲಿರುವ ಗಾಳಿಯ ಪೊರೆಗಳೊಳಗೆ ಬಹುದೂರ ಪ್ರಯಾಣಿಸಬೇಕಾಗಿದೆ. ಆದುದರಿಂದ ಸೂರ್ಯರಶ್ಮಿಯಲ್ಲಿ ಸೇರಿರುವ ಬಣ್ಣಬಣ್ಣದ ಕಿರಣಗಳು ಗಾಳಿಯಲ್ಲಿ ಚೆದರಿ ಹೋಗುತ್ತವೆ.

ಆದರೆ, ಎಲ್ಲಕ್ಕಿಂತ ಹೆಚ್ಚು ದೂರ ನೆಟ್ಟಗೆ ಪ್ರಯಾಣಿಸುವಂಥವು ಅತಿ ದೀರ್ಘ ತರಂಗಗಳಿರುವ ಕೆಂಪು ಕಿರಣಗಳು, ಅವುಗಳನ್ನೇ ನಾವು ಉದಯಾಸ್ತ ಸಮಯಗಳಲ್ಲಿ ನೋಡುತ್ತೇವೆ. ಧ್ವನಿ ತರಂಗಗಳಿಗೆ ಕೂಡಾ ಇದೇ ಮಾತು ವರ್ತಿಸುತ್ತದೆ. ದೂರದಿಂದ ಬರುವ "ಬ್ಯಾಂಡು" ಮೇಳದಲ್ಲಿ ಮೊದಲು ನಮಗೆ ಕೇಳುವುದು "ಡ್ರಮ್"ನ ಧ್ವನಿ. ಧ್ವನಿ ತರಂಗಗಳಲ್ಲಿ ಅತಿ ದೀರ್ಘವಾದುವು ಅವೇ.

ಅದೇ ವಿಧವಾಗಿ ಸೂರ್ಯ ತರಂಗಗಳಲ್ಲಿ ಅತಿ ಸುಲಭವಾಗಿ ಚೆದರಿ ಹೋಗುವಂಥವು ಅತಿಹ್ರಸ್ವವಾದ ನೀಲ ಕಾಂತಿ ತರಂಗಗಳು. ಗಾಳಿ ಪೊರೆಗಳ ತುಂಬಾ ಅವು ಹರಡಿರುವುದರಿಂದ ಆಕಾಶವು ನೀಲವಾಗಿರುವಂತೆ ಕಾಣುತ್ತದೆ. ಇದು ನಿಜವಲ್ಲ. ನಿಜವಾಗಿ ಆಕಾಶವು ಕಪ್ಪಗಾಗಿರುತ್ತದೆ.



## ೮೦

**ಗಾ**ಳಿಗೋಪುರಗಳು ಎಂಬ ಕಥೆಯನ್ನು ಕೇಳಿ ಅತಿಲೋಭಿ, "ಆ ಪಾಪದ ಬ್ರಾಹ್ಮಣ ಫಲಿಸಲಾಗದ ಆಶೆಗಳ ಹಿಂದೆ ನೀರ್ಗುಳ್ಳೆಗಳ ಹಿಂದೆ ಓಡುವಂತೆ ಓಡಿ ತನಗಿದ್ದುದನ್ನೂ ಕಳೆದುಕೊಂಡನು" ಎಂದನು.

"ನಿಜವೇ. ಆದರೆ ಆ ಬ್ರಾಹ್ಮಣನಿಗೆ ತನ್ನದೆಂದು ಇದ್ದುದ್ದೆಲ್ಲಾ ಕೇವಲ ಅರಳು ಹಿಟ್ಟು ಮಾತ್ರವೇ. ಅದು ಅವನ ಮೇಲೆಲ್ಲಾ ಬಿದ್ದಿದೆ. ಸಾಧ್ಯವಾದಷ್ಟು ನೆಕ್ಕಿಕೊಳ್ಳಲೂ ಬಹುದಷ್ಟೆ? ನಾನು ಕಳೆದುಕೊಂಡದ್ದು ಚಿನ್ನವಪ್ಪಾ, ಚಿನ್ನ! ಶರೀರಕ್ಕೆ ಸುರಿಸಿಕೊಂಡದ್ದು ರಕ್ತ! ಎಷ್ಟೇ ಆಲೋಚನೆಮಾಡಿದರೂ ಮನುಷ್ಯನ ಪ್ರಾರಬ್ಧ ವನ್ನು ವಿಧಿಯೇ ನಿರ್ಣಯಿಸುವುದಲ್ಲದೆ ಒಳ್ಳೆಯ ಕೆಟ್ಟ ಕರ್ಮಗಳಲ್ಲವೆಂಬ ನಂಬುಗೆ ನನಗೆ ಬರುತ್ತದೆ. ಅದಕ್ಕೆ ಸರಿಯಾಗಿಯೇ ಓಡುತ್ತದೆ ಬುದ್ಧಿ." ಎಂದನು ಅತ್ಯಂತಲೋಭಿ.

ಅತಿಲೋಭಿ, "ಮಿತ್ರಾ! ಈ ಚಕ್ರ ನಿನ್ನ ನೆತ್ತಿಯನ್ನು ಕೊರೆಯುತ್ತ ರಕ್ತಸುರಿಯುವಂತೆ ತಿರುಗುವುದನ್ನು ನೋಡುವಾಗ, ಕೋತಿಯ ಸಂಕಟ ನೋಡಲಾಗದೆ ಹುಚ್ಚು ಹಿಡಿದು ಓಡಿಹೋದ ರಾಕ್ಷಸನ ಹಾಗೆ, ನನಗೂ ಇಲ್ಲಿಂದ ಓಡಿಬಿಡೋಣವೆಂದು ಕಾಣುತ್ತದೆ" ಎಂದನು.

ಅತ್ಯಂತ ಲೋಭಿ, "ಆ ಕಥೆಯನ್ನು ಹೇಳಿಯಾದರೂ ಹೋಗಪ್ಪ" ಎಂದು ಕೇಳಿಕೊಂಡಾಗ. ಅತಿಲೋಭಿ ಆ ಕಥೆ ಹೇಳಿದನು :

### ಮೋಸಹೋದ ರಾಕ್ಷಸನ ಕಥೆ

ಒಂದು ನಗರದಲ್ಲಿ ಭದ್ರಸೇನನೆಂಬ ರಾಜನಿದ್ದನು, ಅವನಿಗೆ ರತ್ನವತಿ ಎಂಬ ಹೆಸರಿನ ರೂಪಗುಣ ಮೊದಲಾದ ಸರ್ವಲಕ್ಷಣ ಸಂಪನ್ನೆಯಾದ ಒಬ್ಬಳು ಮಗಳಿದ್ದಳು. ಅವಳನ್ನು ನೋಡಿದ ರಾಕ್ಷಸನೊಬ್ಬನು ಅವಳನ್ನು ಪ್ರೇಮಿಸಿ, ಅಪಹರಿಸಿಕೊಂಡು ಹೋಗಿ ಮದುವೆಯಾಗಬೇಕೆಂದು ಪ್ರಯತ್ನಿಸಿದನು. ಆದರೆ ರಾಜಕುಮಾರಿ ರಾಕ್ಷಸನನ್ನು ನಿರೋಧಿಸುವ ಉಪಾಯಗಳನ್ನು ಮಾಡಿಕೊಂಡಿದ್ದುದರಿಂದ ಅವಳನ್ನು ಅಪಹರಿಸಲು ರಾಕ್ಷಸನಿಗೆ ಸಾಧ್ಯವಾಗಲಿಲ್ಲ.

ಒಂದುಸಾರಿ ರಾಕ್ಷಸನು ರಹಸ್ಯವಾಗಿ ಹೊಂಚಿಕೊಂಡಿರುವಾಗ, ರಾಜಕುಮಾರಿ ತನ್ನ ಗೆಳತಿಯರೊಂದಿಗೆ, "ಸಖೀ, ಪ್ರತಿದಿನವೂ ಪ್ರದೋಷ




ರಾಕ್ಷಸನು ನನ್ನನ್ನು ಕಾಡುತ್ತಿದ್ದಾನೆ. ಅವನನ್ನು ಹೇಗೆ ನಿರೋಧಿಸುವುದೆಂದು ಗೊತ್ತಾಗುವುದಿಲ್ಲ" ಎಂದಳು.

ರಾಕ್ಷಸನು ಅವಳು ಹೇಳಿದ ಮಾತನ್ನು ಕೇಳಿ, ತನ್ನೊಳಗೆ ಆಶ್ಚರ್ಯಪಡುತ್ತ, "ಓಹೊ! ಇವಳನ್ನು ನನ್ನ ಹಾಗೆಯೇ ಇನ್ನೊಬ್ಬ ರಾಕ್ಷಸನು ಕೂಡಾ ಪ್ರೇಮಿಸುತ್ತಾನೆಂದಾಯಿತು. ಇವಳು ನನ್ನನ್ನು ನಿರೋಧಿಸುವ ಹಾಗೆ, ಅವನನ್ನು ನಿರೋಧಿಸಲು ಸಾಧ್ಯವಿಲ್ಲವೆಂದು ಚಿಂತಿಸುತ್ತಾಳೆ. ಮೊದಲು ಅವನ ಸಮಾಚಾರ ನೋಡಬೇಕಾಯಿತು" ಎಂದುಕೊಂಡು ಒಂದು ಕುದುರೆಯ ರೂಪ ಧರಿಸಿ ರಾಜನ ಅಶ್ವಶಾಲೆಯಲ್ಲಿ ಸೇರಿದನು. ಕರ್ಮ ಧರ್ಮ ಸಂಯೋಗದ ಹಾಗೆ ಆದೇ ದಿನ ರಾತ್ರಿ ಕುದುರೆಗಳ ಕಳ್ಳನೊಬ್ಬ ರಾಜನ ಅಶ್ವಶಾಲೆಯೊಳಗೆ ಪ್ರವೇಶಿಸಿ, ಎಲ್ಲಾ ಕುದುರೆಗಳಿಗಿಂತಲೂ ಪುಷ್ಟಿಯಾಗಿಯೂ, ಆಕರ್ಷಣೀಯವಾಗಿಯೂ ಇರುವ ಮಾಯದ ಕುದುರೆಯನ್ನೇ ಎಳೆದುಕೊಂಡು ಅದರ ಮೇಲೆ ಹತ್ತಿ ಓಡಿಹೋದನು.

ತಾನು ಕದ್ದುಕೊಂಡ ಕುದುರೆಯ ವೇಗದ ಓಟವನ್ನು ನೋಡಿ ಕಳ್ಳನು ಮೊದಲು ಸಂತೋಷಪಟ್ಟರೂ, ಆಮೇಲೆ ಹೆದರಿ ಅದರ ಕಡಿವಾಣದ ದಾರ ಹಿಡಿದು ಗಟ್ಟಿಯಾಗಿ ಎಳೆದನು. ಆಗ ಕುದುರೆಯ ವೇಗವು ತಗ್ಗುವುದಕ್ಕೆ ಬದಲಾಗಿ ಇನ್ನಿಷ್ಟು ಹೆಚ್ಚಿತು. ಏಕೆಂದರೆ ತನ್ನ ಮೇಲೆ ಏರಿದವನೇ ಪ್ರದೋಷ ರಾಕ್ಷಸನೆಂದು ರಾಕ್ಷಸನಿಗೆ ಅನುಮಾನವೂ, ಭಯವೂ ಆಗಿ ಶಕ್ತಿಯಿದ್ದಷ್ಟೂ ವೇಗವಾಗಿ ಓಡುತ್ತಿದ್ದನು.

ಹಾಗೆಯೇ ಕಳ್ಳನೂ ತುಂಬಾ ಹೆದರಿದನು. ಏಕೆಂದರೆ ಕಡಿವಾಣವನ್ನು ಎಳೆದಷ್ಟೂ ಮತ್ತಿಷ್ಟು ವೇಗವಾಗಿ ಓಡುವ ಕುದುರೆಯನ್ನು ಅವನು ಎಂದಿಗೂ ನೋಡಿರಲಿಲ್ಲ. "ಇದು ಕುದುರೆಯಲ್ಲ, ಯಾವುದೋ ಪಿಶಾಚಿಯಾಗಿರಬೇಕು. ಇದರಿಂದ ಜೀವ ಉಳಿದರೆ ಸಾಕಾಗಿದೆ" ಎಂದುಕೊಂಡು, ಕಳ್ಳನು ಓಡುವ ದಾರಿಯಲ್ಲಿ ಸಿಕ್ಕಿದ ಆಲದ ಬಿಳಲನ್ನು ಹಿಡಿದುಕೊಂಡು ಮೇಲೇರಿಬಿಟ್ಟನು.

ಪ್ರದೋಷ ರಾಕ್ಷಸನು ತನ್ನನ್ನು ಬಿಟ್ಟು ಮೇಲೇರಿದುದನ್ನು ನೋಡಿ ರಾಕ್ಷಸನಿಗೂ ಬಹಳ ಸಂತೋಷವಾಯಿತು. ಆ ಮರದ ಮೇಲಿದ್ದ ಒಂದು ಕೋತಿಗೂ ಕುದುರೆರೂಪದ ರಾಕ್ಷಸನಿಗೂ ಸ್ನೇಹವಿತ್ತು. ಅಂತೆಯೇ ಅದು ಕುದುರೆಯಾದ ರಾಕ್ಷಸನ ಬಳಿಗೆ ಹಾರಿ ಬಂದು, "ಇದೇನು ರಾಕ್ಷಸ ಮಿತ್ರಾ! ನಿನ್ನ ಮೇಲೆ ಸವಾರಿ ಮಾಡಿದವನು ಸಾಧಾರಣ ಮನುಷ್ಯನೇ. ನಿನಗೆ ಸಹಜವಾದ ಆಹಾರವಾದ ಅವನನ್ನು ತಿನ್ನುವುದು ಬಿಟ್ಟು, ಹೊತ್ತುಕೊಂಡು ಇಷ್ಟು ಜೋರಾಗಿ ಓಡಿ ಬಂದೆ ಏಕೆ?" ಎಂದು ಕೇಳಿತು.

ಆ ಮಾತು ರಾಕ್ಷಸನಿಗೆ ಅವಮಾನವೆನಿಸಿತು, ಕೋತಿಯ ಬಾಲವನ್ನು ಹಿಡಿದೆಳೆದು, ಅದನ್ನು ಮರದ ಎಡೆಯಲ್ಲಿ ಇರುಕಿಸಿ ಪೀಡಿಸುತ್ತ ಅದರ ಬಾಲವನ್ನು ಕಡಿಯತೊಡಗಿದನು. ಆಗ ಕೋತಿಯ ಮುಖವು ಭೀತಿಯಿಂದ ಕಪ್ಪಿಟ್ಟು ವಿಕಾರವಾಯಿತು.

"ಅಬ್ಬಾ! ಪ್ರದೋಷ ರಾಕ್ಷಸನೆಂದರೆ ಎಂತಹ ಭಯಂಕರದವನೆಂದು ಈ ಮುಖ ನೋಡಿದ ಕೂಡಲೇ ಗೊತ್ತಾಗುತ್ತದೆ. ಇನ್ನೆಂದಿಗೂ ನಿನ್ನ ಕೈಗೆ ಸಿಕ್ಕುವವನಲ್ಲ ನಾನು!" ಎಂದು ರಾಕ್ಷಸನು ಅಲ್ಲಿಂದ ಓಡಿ ಹೋದನು.

ಅತಿಲೋಭಿ ಹೇಳಿದ ಕಥೆಯನ್ನು ಕೇಳಿ ಅತ್ಯಂತ ಲೋಭಿ, "ಭ್ರಮೆ ಹಿಡಿದ ರಾಕ್ಷಸನು ಕೋತಿಗೂ ಭ್ರಮೆ ಹಿಡಿಸಿ ಓಡಿದನಾದರೂ, ನನಗೆ ಕೂಡಾ ವಿಧಿ ಅನುಕೂಲವಾಗಿದ್ದರೆ, ಹತ್ಯಾ ಪ್ರಯತ್ನಗಳು ಕೂಡಾ ಕುರುಡನಿಗೂ, ಮೂರು ಮೊಲೆಗಳಿರುವ ರಾಜಕುಮಾರಿಗೂ ಆದ ಹಾಗೆ ಮೇಲೇ ಆಗುತ್ತದೆ." ಎಂದನು. "ಆದೇನು ಕಥೆ ಮಿತ್ರಾ?" ಎಂದು ಅತಿ ಲೋಭಿ ಕೇಳಿದನು, ಆದಕ್ಕೆ ಅತ್ಯಂತಲೋಭಿ ಆ ಕಥೆಯನ್ನು ಹೇಳಿದನು:

### ತ್ರಿಸ್ತನಿ ರಾಜಕುಮಾರಿಯ ಕಥೆ

ಮಧುಸೇನನೆಂಬ ರಾಜನು ಮಧುರೆಯ ರಾಜನಾಗಿದ್ದನು. ಅವನಿಗೆ ಮೂರು ಮೊಲೆಗಳಿರುವ ಕುಮಾರಿಯೊಬ್ಬಳು ಹುಟ್ಟಿದಳು. ಹೀಗೆ ವಿಲಕ್ಷಣವಾಗಿ ತನಗೆ ಹೆಣ್ಣು ಮಗು ಹುಟ್ಟಿದ ಸಮಾಚಾರ ಕೇಳಿ ರಾಜನು, ಪ್ರತೀಹಾರಿಯೊಂದಿಗೆ, "ಆ ಮಗು ನನ್ನ ಕಣ್ಣಿಗೆ ಬೀಳಕೂಡದು. ತೆಗೆದುಕೊಂಡು ಹೋಗಿ ಅರಣ್ಯದಲ್ಲೆಲ್ಲಿಯಾದರೂ ಬಿಟ್ಟು ಬಂದು ಬಿಡು" ಎಂದು ಆಜ್ಞೆ ಮಾಡಿದನು.

ಆಗ ಪ್ರತೀಹಾರಿ, "ಪ್ರಭುಗಳೇ, ಮೂರುಮೊಲೆಗಳಿರುವ ಮಗಳಿಂದ ತಂದೆಗೆ ಕೆಡುಕು ಎಂಬುದನ್ನು ನಾನೂ ಕೇಳಿದ್ದೇನೆ. ಆದರೂ ಲೋಕ ನಿಂದೆಯೂ, ಮುಂದಿನ ಜನ್ಮದಲ್ಲಿ ಈ ಪಾಪದ ಫಲ ಬಾರದಂತೆಯೂ ಇರಲು ವಿಜ್ಞರಾದ ಬ್ರಾಹ್ಮಣರ ಆಲೋಚನೆ ಕೇಳುವುದು ಒಳ್ಳೆಯದೆಂದು ನನಗೆ ಕಾಣುತ್ತದೆ. ಶ್ರದ್ಧೆಯಿಂದ ವಿಚಾರ ಮಾಡಿ, ಆಲೋಚಿಸುವವನ ಬುದ್ಧಿ, ಸೂರ್ಯ ಕಿರಣಗಳಿಂದ ಪದ್ಮವು ಅರಳುವ ಹಾಗೆ ಅರಳುತ್ತದೆಂದು ಹೇಳುತ್ತಾರೆ. ಅಜ್ಞಾನದಿಂದ ಅಸಹಾಯನಾಗಿರುವವನು ತಿಳಿದವರ ಹತ್ತಿರ ಪ್ರಶ್ನೆ ಕೇಳಬೇಕು, ಹಿಂದೆ ಒಬ್ಬ ಬ್ರಾಹ್ಮಣನು



ಆಕಸ್ಮಿಕವಾದ ಒಂದು ಪ್ರಶ್ನೆಯಿಂದ ತನ್ನನ್ನು ಹಿಡಿದಿದ್ದ ಭೂತದಿಂದ ಬಿಡುಗಡೆಯಾದನಷ್ಟೆ?" ಎಂದನು.

"ಅದೇನು ಕಥೆ?" ಎಂದು ರಾಜನು ಕೇಳಲು, ಪ್ರತೀಹಾರಿ ಹೀಗೆಂದನು:

ಒಂದು ಭಯಂಕರವಾದ ಅರಣ್ಯದಲ್ಲಿ ಚಂಡಕರ್ಮ ನೆಂಬ ದೊಡ್ಡದೊಂದು ಭೂತವಿದ್ದಿತು. ಒಂದು ದಿನ ಆ ಮಹಾಭೂತವು ಅರಣ್ಯದಲ್ಲಿ ತಿರುಗುತ್ತ, ಯಾವುದೋ ಮೂಲಿಕೆಗಳನ್ನು ಹುಡುಕುವ ಒಬ್ಬ ಬ್ರಾಹ್ಮಣನನ್ನು ನೋಡಿ, ಅವನ ಹೆಗಲಿನ ಮೇಲೆ ಹತ್ತಿ ಕುಳಿತು, "ನಡೆ!" ಎಂದಿತು.

ಬ್ರಾಹ್ಮಣನು ಹೆದರಿ ನಡೆಯತೊಡಗಿದನು. ಆಗ ಆ ಭೂತದ ಕಾಲುಗಳು ತುಂಬ ನಾಜೂಕಾಗಿ, ಪದ್ಮಪುಷ್ಪಗಳ ಹಾಗೆ ಸುಕುಮಾರವಾಗಿರುವುದನ್ನು ನೋಡಿ ಆ ಬ್ರಾಹ್ಮಣನು, "ಇದೇನಪ್ಪ ಆಶ್ಚರ್ಯ! ಈ ಮಹನೀಯನ ಪಾದಗಳು ಇಷ್ಟೊಂದು ಅಂದ ವಾಗಿರಲು ಏನು ಕಾರಣವೋ?" ಎಂದು ತನಗೆ ತಾನೇ ಕೇಳಿಕೊಂಡನು.

ಅದನ್ನು ಕೇಳಿ ಭೂತವು ನಗುತ್ತ, "ಅದುವೋ? ನಾನೊಂದು ನಿಯಮವನ್ನು ಬಿಡದೆ ಪಾಲಿಸುತ್ತೇನೆ. ನಾನು ಒದ್ದೆ ಪಾದಗಳಿಂದ ನೆಲದಲ್ಲಿ ನಡೆಯುವುದಿಲ್ಲ. ಅದಕ್ಕೇ ನನ್ನ ಪಾದಗಳು ಇಷ್ಟು ಸುಕುಮಾರ ವಾಗಿವೆ" ಎಂದು ಹೇಳಿತು.

ಈ ಮಾತು ಕೇಳಿ ಆ ಭೂತದಿಂದ ಬಿಡುಗಡೆ ಯಾಗುವ ಉಪಾಯವು ಬ್ರಾಹ್ಮಣನಿಗೆ ಮಿಂಚಿತು. ಅದನ್ನು ಹೊತ್ತುಕೊಂಡು ನಡೆಯುತ್ತಾ ಒಂದು ಕೊಳದ ಬದಿಗೆ ಹೋದನು.

"ನಿಲ್ಲು. ನನಗೆ ಸ್ನಾನ ಮಾಡಬೇಕು. ನಾನು ಸ್ನಾನ ಮುಗಿಸಿ, ದೇವರನ್ನು ಧ್ಯಾನಿಸಿ ಬರುತ್ತೇನೆ. ಅಷ್ಟರವರೆಗೆ ಇಲ್ಲೇ ಇರು! ಕದಲಿದರೆ ಜೋಕೆ!" ಎಂದು ಎಚ್ಚರಿಸಿ ಭೂತವು ಕೊಳಕ್ಕೆ ಇಳಿಯಿತು.

ಅದನ್ನು ನೀರಿಗಿಳಿಸಲು ಏನು ಉಪಾಯವೋ ಎಂದು ಬ್ರಾಹ್ಮಣನು ಯೋಚಿಸುವಾಗ, ಅದು ತಾನಾಗಿ ಇಳಿದದ್ದು ನೋಡಿ ಬ್ರಾಹ್ಮಣನಿಗೆ ಸಂತೋಷ ವಾಯಿತು. "ಇನ್ನು ಅದು ಸ್ನಾನ ಮಾಡಿ ಧ್ಯಾನ ಮಾಡಿ ಬಂದ ಮೇಲೆ ಖಂಡಿತವಾಗಿಯೂ ನನ್ನನ್ನು ಪಾರಣೆ ಮಾಡಿ ತೇಗುತ್ತದೆ. ಈಗ ಓಡಿ ಹೋಗ ದಿದ್ದರೆ ನನ್ನಷ್ಟು ಮುಟ್ಠಾಳ ಬೇರೆ ಯಾರೂ ಇಲ್ಲ. ಇದೇ ಒಳ್ಳೇ ಸಮಯ! ಅದರ ಎಚ್ಚರಿಕೆಗೆ ನಾನು ಹೆದರಬಾರದು. ನೆಲದ ಮೇಲೆ ನಡೆಯಲು ಅದಕ್ಕಾಗದು. ಆಕಾಶದಲ್ಲಿ ಹಾರಿ ಬಂದರೆ ಆಗ ನೋಡೋಣ! ಸಾಯುವವರೆಗೂ ಬದುಕುವ ಆಶೆ ಬಿಡಬಾರದು" ಎಂದುಕೊಂಡು ಸಾಧ್ಯವಿರುವಷ್ಟು ವೇಗವಾಗಿ ಅಲ್ಲಿಂದ ಹಿಂದುರುಗಿ ನೋಡದೆಯೇ ಹಾರೋಟದಿಂದ ಓಡಿದನು.





# ಕರಡಿಕೆಂಗಣ್ಣ

## ೨೦

[ಮಂತ್ರದಂಡವನ್ನು ತೆಗೆದುಕೊಂಡು ಹೋದ ಬೈರಾಗಿಯ ಶಿಷ್ಯರಿಬ್ಬರು ಅದರ ಪ್ರಭಾವವನ್ನು ತಿಳಿಯಲು ಅದನ್ನು ನೆಲಕ್ಕೆ ಹೊಡೆದಾಗ, ಅಲ್ಲೊಂದು ಸುರಂಗ ಕಂಡುಬಂತು. ಒಳಗೆ ನಿಧಿಯಿರುವುದೆಂಬ ಆಶೆಯಿಂದ ಅವರು ತಮ್ಮ ಗುರುವಿನೊಂದಿಗೆ ಅದರೊಳಗೆ ಇಳಿದರು. ಆಗ ಸಮಿಾಪದ ಕೆರೆಯಬಳಿಗೆ ಬಂದ ಕಟುಕಕರಡಿಯವನು ಒಬ್ಬ ಬೇಡನನ್ನು ನೋಡಿ ಮಾಯಾಮರ್ಕಟನ ಕಡೆಯವನೆಂದು ಅವನನ್ನು ಹಿಡಿಯಲು ಹೋದನು.]

**ಕ**ರಡಿ ಮೂತಿಯ ಮನುಷ್ಯಾಕಾರದಲ್ಲಿ ಭಯಂಕರನಾಗಿ ಕಾಣುವ ಕಟುಕಕರಡಿಯುವನನ್ನು ನೋಡಿ, ಅವನ ಕೈಯಲ್ಲಿ ತಳತಳಿಸುವ ಹರಿತವಾದ ಕೊಡಲಿ ಎಲ್ಲಿ ತನ್ನ ಮೇಲೆ ಬೀಳುವುದೋ ಎಂದು ಹೆದರಿ ಜಮುಗುಟ್ಟಿಕೊಂಡು, ಓಡಿಹೋದರೂ ಕೊಡಲಿ ಹಾರಿ ಬಂದು ಹೊಡೇದೀತೆಂಬ ಅನುಮಾನದಿಂದ ಆ ಬೇಡನು ನಿಂತಲ್ಲೇ ಮರಗಟ್ಟಿದನು. ಬಹು ಕಷ್ಟದಿಂದ ಕೈಗಳನ್ನು ಜೋಡಿಸಿ, "ಸತ್ಯಕ್ಕೂ ಮಾಯಾಮರ್ಕಟನ್ನನಾಕಾಣೆ. ಹೋದವಾರ ಕಾಡಿನಲ್ಲಿ ವಿಚಿತ್ರ ಮನುಷ್ಯರನ್ನೂ, ಭಯಂಕರನಾದ ರಾಕ್ಷಸನನ್ನೂ ದೂರದಿಂದ ನೋಡಿದೆನೇ ಹೊರತು ಮಾತಾಡಲಿಲ್ಲ. ನೀವು ಹೇಳುವ ಮಾಯಾಮರ್ಕಟ ಯಾರೋ ನಾನರಿಯೆ. ಕೆಂಪು ಬಟ್ಟೆಯುಟ್ಟುಕೊಂಡು, ನೆತ್ತೀಮೇಲೆ ಜುಟ್ಟು ಕಟ್ಟಿಕೊಂಡಿದ್ದವನೊಬ್ಬ ಶಂಖ ಊದುತ್ತಾ ಓ ಮಾಯಾಮರ್ಕಟಾ ಎಲ್ಲಿದ್ದೀಯಾ ಅಂತ ಕೂಗುತ್ತಾ ಇರುವುದು ಮಾತ್ರ ಕಿವಿಗೆ ಬಿದ್ದಿತ್ತು! ಇಷ್ಟೇ ಹೊರತು ಇನ್ನೇನೂ ನಾನರಿಯೆ! ಮಾದೇವ ನಾಣೆಗೂ ಇದು ಸತ್ಯ" ಎಂದನು.

ಬೇಡನ ಬಾಯಿಯಿಂದ ಹೊರಡುವ ಮಾತುಗಳನ್ನು ಕೇಳ ಕೇಳುತ್ತಿದ್ದಂತೆ ಕಟುಕ ಕರಡಿಯುವನಿಗೆ



ಆಶ್ಚರ್ಯದಲ್ಲಿ ಏನೇನೋ ತೋರಿ ಗಜಬಿಜಿಯಾಗಿ, ತನ್ನ ಕೊಡಲಿಯನ್ನು ಕೆಳಗಿಳಿಸಿ, "ಎಲೋ ಬೇಡಾ! ನೀನೇನೋ ಮುಖ್ಯವಾದ ಸಮಾಚಾರವನ್ನೇ ಹೇಳುವ ಹಾಗೆ ನನಗೆ ಅನುಮಾನವಾಗುತ್ತದೆ. ನಿನ್ನ ಮಾತಿನಲ್ಲಿ ಅಡಗಿರುವ ರಹಸ್ಯವೇನೆಂಬುದೆಲ್ಲಾ ನನ್ನ ಯಜಮಾನ ಕಾಳೀವರ್ಮ ಪ್ರಭುಗಳಿಗೇ ತಿಳಿಯಬೇಕು. ಓಡಿಬಿಡಬೇಡ, ನಿಲ್ಲು. ನಿನಗೆ ನಾನೇನೂ ಮಾಡಲಾರೆ. ಹೆದರಬೇಡ. ಯಾವ ಭಯವೂ ಇಲ್ಲ." ಎಂದು ಸಮಾಧಾನವಾಗಿ ಹೇಳಿದನು.

ಕಟುಕಕರಡಿಯುವನೊಂದಿಗಿದ್ದ ಆಟವಿಕನು ಕೂಡಾ ಆಶ್ಚರ್ಯಪಡುತ್ತ, "ಭಲ್ಲೂಕಯ್ಯಾ, ಈ ಬೇಡನು ಹೇಳುವ ಮಾತು ನಂಬುವಂಥಾದ್ದೇನಾ? ಒಬ್ಬ ಮಾಂತ್ರಿಕರೂ, ಉಗ್ರದಂಡ ರಾಕ್ಷಸನೂ ನಮ್ಮೊಂದಿಗೇ ಇರುವಾಗ, ಮತ್ತೊಬ್ಬ ಶಂಖದ ಮಾಂತ್ರಿಕನೂ ರಾಕ್ಷಸನೂ ಕಾಡಿನಲ್ಲಿ ತಿರುಗುತ್ತಿರುವರೆಂದರೆ ಏನು ಅರ್ಥ?" ಎಂದನು.

"ಅದೇ ನನಗೂ ಗೊತ್ತಾಗುವುದಿಲ್ಲ. ನಮ್ಮ ಮಹಾ ಕೆಂಗಣ್ಣ ಮಾಂತ್ರಿಕರಿಗೆ ಸ್ಪರ್ಧಾಳುವಾಗಿ ಇನ್ನೊಬ್ಬ ಮಾಂತ್ರಿಕನಾರಾದರೂ ಹೊರಟಿರುವನೋ ಏನೋ? ಅದಿರಲಿ, ಎಲೋ ಬೇಡಾ, ನೀನು ಹೇಳಿದ ಕಳ್ಳ ಬೈರಾಗಿಗಳು ಯಾರು? ಯಾವುದೋ ಸುರಂಗ ಗಿರಂಗ ಅಂದೆಯಲ್ಲಾ! ಅದೆಲ್ಲಾ ಏನು ಕತೆ? ಎಲ್ಲಿ? ಯಾವಾಗ ಏನು ಕದ್ದರು?" ಎಂದು ಕಟುಕ ಕರಡಿ ಯುವನು ಕೇಳಿದನು.

"ಹೀಗೆ ಬನ್ನಿ" ಎಂದು ಬೇಡನು ಅವನನ್ನು, ಗುರು ಬೈರಾಗಿ ಶಿಷ್ಯರೊಂದಿಗೆ ಇಳಿದು ಹೋದ ಸುರಂಗದ ಬಾಯಿಯ ಬಳಿಗೆ ಕರೆದೊಯ್ದು, ಒಂದು ಮಂತ್ರದಂಡದಿಂದ ಅವರು ಮಾಡಿದ ಅದ್ಭುತಗಳನ್ನು ಕುರಿತು ಹೇಳಿದನು.

ಆ ಮಂತ್ರದಂಡವು ಕರಡಿಕೆಂಗಣ್ಣ ಮಾಂತ್ರಿಕನಿಂದ ಮಾಯಾಮರ್ಕಟನು ಅಪಹರಿಸಿಕೊಂಡು ಹೋದುದೇ ಎಂದು ಕಟುಕಕರಡಿಯುವನಿಗೆ ಅರ್ಥವಾಯಿತು. ಈಗ ಆ ಮಂತ್ರದಂಡವು ಮತ್ತಾರೋ ಬೈರಾಗಿಗಳ ಕೈಯಲ್ಲಿದೆಯೆಂದಾಯಿತು!

ಈ ಸಂಗತಿಯನ್ನು ತನ್ನ ಒಡೆಯರಿಗೆ ತಿಳಿಸಬೇಕೆಂದು ಕಟುಕಕರಡಿಯುವನು ತಿರುಗುವಷ್ಟರಲ್ಲಿ, ಕಾಳೀವರ್ಮನು ಕುದುರೆಯ ಮೇಲೆ ಅಲ್ಲಿಗೇ ಬಂದು, "ನರಭಲ್ಲೂಕಾ, ನಾವು ಗುಡಾರ ಹಾಕಿಕೊಳ್ಳಲಿಕ್ಕೆ ಈ ಸ್ಥಳವು ಅನುಕೂಲವಾಗಿದೆ, ಅಲ್ಲವೇ? ಸಮೀಪದಲ್ಲೇ ಒಳ್ಳೆಯ ಕೆರೆಯೂ ಇದೆ. ಇನ್ನೇನಾಗಬೇಕು ನಮಗೆ?" ಎಂದನು.

"ಈಗ ಅದಕ್ಕಿಂತ ಮುಖ್ಯ ವಿಷಯವೊಂದು ಗೊತ್ತಾಗಿದೆ ದೊರೆಗಳೇ! ಗುಡಾರ ನಿರ್ಮಾಣದ ಮಾತು ಆ ಮೇಲೆ ನೋಡುವಾ. ಮೊದಲು ಈ ಬೇಡರವನು ಹೇಳುವ ಮಾತುಗಳನ್ನು ಕೇಳಿರಿ. ಇವನು ಆಶ್ಚರ್ಯಕರವಾದ ಎರಡು ವಿಷಯ ಹೇಳುತ್ತಾನೆ!" ಎಂದನು ಕರಡೀ ಮನುಷ್ಯ.

ಕಾಳೀವರ್ಮನು ಆ ಬೇಡನನ್ನು ನೋಡಿ ಏನು ಸಂಗತಿ ಎಂದು ಕೇಳಿದನು. ಬೇಡನು ತಾನು ಕಾಡಿನಲ್ಲಿ ನೋಡಿದ ಶಂಖ ಮಾಂತ್ರಿಕನನ್ನು ಕುರಿತು, ರಾಕ್ಷಸ ನನ್ನು ಕುರಿತು, ಸುರಂಗದೊಳಗೆ ಹೋದ ಬೈರಾಗಿ ಗಳನ್ನು ಕುರಿತು ಇನ್ನೊಮ್ಮೆ ಹೇಳಿದನು.

ಅದನ್ನು ಕೇಳಿ ಕಾಳೀವರ್ಮನು ಕುತೂಹಲದಿಂದ, ಭೂಸುರಂಗದ ಮುಖದ್ವಾರದ ಬಳಿಗೆ ಹೋಗಿ, ಒಂದುಸಾರಿ ಅದರೊಳಗೆ ಬಗ್ಗಿ ನೋಡಿ, ಜಾಗರೂಕತೆ ಯಿಂದ ಕೆಳಗಿಳಿದನು. ಅವನು ಅಲ್ಲಿರುವ ಮೆಟ್ಟಿಲು ಗಳನ್ನೆಲ್ಲ ಇಳಿದು ನೆಲಕ್ಕೆ ಕಾಲಿಟ್ಟು, ಪಾದದಳತೆಯ ನೀರಿನಲ್ಲಿ ಮುಂದೆ ಹೋಗಲು, ದೂರದಲ್ಲಿ ಒಂದು ಚಿಕ್ಕ ಬೆಳಕೂ, ಅದರ ಕಡೆಗೆ ನಡೆಯುತ್ತಿರುವ ಮೂರು ಕಪ್ಪಗಿನ ಮಾನವಾಕಾರಗಳೂ ಕಂಡು ಬಂದುವು.



ಕಾಳೀವರ್ಮನು ಏನೋ ನೆನೆದು ಸುರಂಗದಿಂದ ಹಿಂದಿರುಗಿ, ಮೆಟ್ಟಿಲೇರಿ ಮೇಲೆ ಬಂದು, ಕಟುಕ ಕರಡಿಯವನನ್ನು ನೋಡಿ, "ಎಲೋ ಕಟುಕ ನಾಯಕನೇ! ನಿನ್ನ ಆಟವಿಕ ಸೇವಕನನ್ನು ಇಲ್ಲಿ ಕಾವಲಿಗೆ ನಿಲ್ಲಿಸು. ನೀನು ಬೇಗನೆ ಹೋಗಿ ಮಾಂತ್ರಿಕ ಗುರುಗಳ ಹತ್ತಿರ. ಇಲ್ಲಿ ನೋಡಿದ್ದನ್ನೂ ಕೇಳಿದ್ದನ್ನೂ ಎಲ್ಲಾ ಹೇಳಿಬಿಡು. ಅಷ್ಟರೊಳಗೆ ನಾನು ಸುರಂಗ ಮಾರ್ಗದಲ್ಲಿ ಹೋಗಿ ಆ ಬೈರಾಗಿಗಳ ಹತ್ತಿರವಿದ್ದ ಗುರುಗಳ ಮಂತ್ರದಂಡವನ್ನು ಎಳೆದುಕೊಂಡು ಬರುತ್ತೇನೆ. ಅದಿಲ್ಲದೆ ನಮ್ಮ ಗುರುಗಳಿಗೆ ಎರಡು ಕೈಗಳೂ ಇಲ್ಲದ ಹಾಗಾಗಿದೆ." ಎಂದನು.

"ಅಪ್ಪಣೆ ದೊರೇ!" ಎಂದು ಕಟುಕಕರಡಿಯವನು ನಾಲ್ಕಡಿ ಹೋಗಿ ಗಕ್ಕನೆ ನಿಂತು ಹಿಂದಿರುಗಿ ನೋಡಿ, "ಕಾಳೀವರ್ಮ ಪ್ರಭೋ! ಆ ಬೈರಾಗಿಗಳ ಹತ್ತಿರ ಇರುವಂಥಾದ್ದು ಮಹತ್ವವಾದ ಮಂತ್ರದಂಡ! ಈ ಸಂಗತಿ ನೆನಪಿಟ್ಟುಕೊಳ್ಳಿ!" ಎಂದನು. ಆ ಮೇಲೆ ತನಗೆ ತಾನೇ, "ಆ ಮಂತ್ರದಂಡವಿಲ್ಲದೆ ನನ್ನ ಈ ಕರಡೀ ಮುಖವೂ ಹೋಗಲಾರದು. ಬೇಗ ತನ್ನಿರಪ್ಪಾ" ಎಂದುಕೊಂಡನು.

ಕಾಳೀವರ್ಮನು ತನ್ನ ಕತ್ತಿಯನ್ನು ತೋರಿಸಿ, "ನರಭಲ್ಲೂಕಾ! ಈ ಬಂಗಾರದ ಹಿಡಿಯ ಕತ್ತಿಯಲ್ಲಿ ಮಹತ್ವವಿರಲಿ, ಇಲ್ಲದಿರಲಿ, ಎಂಥ ಮಂತ್ರದಂಡ ವನ್ನೂ ಇದಿರಿಸಬಲ್ಲಂಥಾದ್ದು ಇದು! ನನ್ನ ತಂದೆಯ ಕೈಯಲ್ಲಿರುವಾಗ ಅಜೇಯವಾಗಿ ಶತ್ರುಗಳನ್ನು ಚೆಂಡಾಡಿದಂಥಾದ್ದು. ಇನ್ನು ಈ ಕತ್ತಿ ಬೇಗದಲ್ಲೇ ಜಿತ ಕೇತುರಾಜನ ತಲೆಯನ್ನೂ ಕಡಿಯಬಹುದು" ಎಂದು ಕಡೆಯ ಮಾತನ್ನು ತನಗೆ ತಾನೇ ಹೇಳಿಕೊಂಡು ಹೋದನು. ಆಲದಮರದ ಮೇಲಿಂದ ಕೆಳಗೆ ಹಾರಿ ಇವರ ಕೈಯಲ್ಲಿ ಏಕೆ ಸಿಕ್ಕಿ ಹಾಕಿಕೊಂಡೆನೋ ಎಂದು ಚಡಪಡಿಸುತ್ತಿದ್ದ ಬೇಡರವನು, "ಅಯ್ಯಾ, ಇನ್ನು ನಾನು ನನ್ನ ಪಾಡಿಗೆ ಹೋಗಲೇ? ನಾನು ಕಾಡಿನಲ್ಲಿ ಸಿಕ್ಕಿದ್ದು ತಿಂದು ಜೀವಿಸುವವನು," ಎಂದು ಕೇಳಿದನು. ಆಗ ಕರಡಿಯವನ ಬಂಟನಾದ ಆಟವಿಕನು



ಬೇಡನ ಬಳಿಗೆ ಬಂದು, "ಅಲ್ಲೋ, ನೀನೊಬ್ಬ ಬೇಡತಾನೇ. ನಾನೂ ಸಹಾ ಕಾಡಿನೊಳಗಿನವನೇ. ಬದುಕಲಿಕ್ಕಾಗಿ ನಾವಿಬ್ಬರೂ ಕಾಡಿನೊಳಗೆ ತಿರುಗುವವರೆಂದಾಯಿತು. ಈಗ ಒಂದು ಯೋಚನೆ ಹೇಳುತ್ತೇನೆ. ನೀನು ನನ್ನ ಹಾಗೆ ಯಾವನೋ ಒಬ್ಬ ಶಕ್ತಿವಂತನನ್ನು ಆಶ್ರಯಿಸಿ ಏಕೆ ಸುಖಪಡಬಾರದು? ಈ ಚಂದ್ರಶಿಲಾ ನಗರದ ರಾಜ ಇನ್ನು ಹೆಚ್ಚು ದಿನ ಬದುಕಲು ಸಾಧ್ಯವಿಲ್ಲ. ಅವನನ್ನು ಮಣ್ಣುಗೂಡಿಸಿ ಗೆಲ್ಲುವವರ ಪಕ್ಷದಲ್ಲೇ ನಾವಿದ್ದುಬಿಟ್ಟರೆ, ಇನ್ನು ಮುಂದೆ ಬೇಗದಲ್ಲೇ ರಾಜರ ಆಸ್ಥಾನದಲ್ಲಿ ಒಳ್ಳೆಯ ನೌಕರಿ ಸಿಗುವ ಸಾಧ್ಯತೆಯಿದೆ. ಯಾಕಾಗ ಬಾರದು? ನಮ್ಮ ಪಾದಗಳು ಕಾಡಿನ ಕಲ್ಲು ಮುಳ್ಳುಗಳನ್ನೇ ಮುದ್ದಿಸಿಕೊಂಡಿರಬೇಕೆ?" ಎಂದನು.

ಬೇಡನು ಆಶಾ ದೃಷ್ಟಿಯಿಂದ ಆಟವಿಕನ ಮುಖ ನೋಡುತ್ತ, "ಕಾಡಣ್ಣಯ್ಯಾ! ಏನೋ ತುಂಬಾ ಸಂಗತಿ ಹೇಳುತ್ತೀ. ಚೆನ್ನಾಗೇ ಇದೆ. ಅದೆಲ್ಲಾ ನಿಜವಾಗೇ ನಡೆದೀತಾ? ಈ ಜಿತಕೇತು ರಾಜ ತುಂಬಾ ಕೆಟ್ಟವ. ಯಾವುದಕ್ಕೂ ಉಪಯೋಗವಿಲ್ಲದವ. ಆದರೆ ಸೇನೆಗೀನೆ ಇರುವ ಬಲವಂತ. ಇಂಥಾ ರಾಜನನ್ನು ಸಿಂಹಾಸನದಿಂದ ಇಳಿಸುವಂಥ ಬಲವಂತರು ಯಾರಪ್ಪಾ! ನನಗೊಂದೂ ತೋರೋದಿಲ್ಲ!" ಎಂದನು.

ಆಟವಿಕನು ಸುರಂಗದಲ್ಲಿ ಇಳಿದುಹೋಗುವ ಕಾಳೀವರ್ಮನನ್ನು ತೋರಿಸುತ್ತ, "ಅಕೋ, ಆತನೇ! ಕಾಳೀವರ್ಮಾ ಅಂತ ಹೆಸರು. ಜಿತಕೇತುರಾಜ ಈತನನ್ನು ಅವಮಾನಪಡಿಸಿ ಮರಣದಂಡನೆ ಕೂಡಾ ಕೊಟ್ಟ. ಇವನು ತಪ್ಪಿಸಿಕೊಂಡು ಆ ರಾಜನ ಮೇಲೆ ಕತ್ತಿ ಮಸೆಯುತ್ತಿದ್ದಾನೆ. ನಾವೆಲ್ಲಾ ದೊಡ್ಡ ರಾಕ್ಷಸರೂ, ಮಹಾಮಂತ್ರವಾದಿಗಳೂ ಅವನ ಹಿಂಬಾಲಕರು, ಇವನೇ ಮುಂದಿನ ರಾಜ ಅಂತ ನಂಬು!" ಎಂದನು.

"ಹಾಗಾದರೆ ನಾನೂ ನಿನ್ನೊಂದಿಗೇ ಅಂತ ನಂಬು ಅಣ್ಣಾ!" ಎಂದು ಬೇಡನು ಆನಂದದಿಂದ ಆಟವಿಕನನ್ನು ಅಪ್ಪಿಕೊಂಡನು.

ಇಲ್ಲಿ ಹೀಗಿರಲು, ಸುರಂಗದೊಳಗೆ ಇಳಿದ ಕಾಳೀವರ್ಮನು ನೀರಿನಲ್ಲಿ ನಡೆಯುತ್ತ, ಸ್ವಲ್ಪ ದೂರ ಹೋಗಿ, ಮುಂದೆ ಮೆಲ್ಲನೆ ನಡೆಯುವ ಬೈರಾಗಿಗಳನ್ನು ನೋಡಿ, "ಓಯ್! ನಿಲ್ಲಿರಲ್ಲಿ!" ಎಂದು ಗರ್ಜನೆ ಹಾಕಿದನು. ಅದು ಆ ಗುಹೆಯೊಳಗೆ ಭಯಂಕರವಾಗಿ ಕೇಳಿಸಿತು.

ಆ ಕೂಗನ್ನು ಕೇಳಿ ಬೈರಾಗಿಗಳು ಹೆದರಿಬಿದ್ದು ಹಿಂದಿರುಗಿ ನೋಡಿದರು. ಚಿಕ್ಕ ಶಿಷ್ಯ ಬೈರಾಗಿ ಗದಗದ ನಡುಗುತ್ತ, "ಬೈರಾಗಿ ಗುರೋ! ನಿಧಿಯ ರಕ್ಷಕನಾದ ಯಕ್ಷನು ನಮ್ಮ ಪ್ರಾಣ ತೆಗೆಯಲು ಬರುತ್ತಿದ್ದಾನೆ! ಕಾಪಾಡಿ!" ಎಂದನು ನಡುಗುವ ದನಿಯಿಂದ.

ಗುರು ಬೈರಾಗಿ ಕೂಡಾ ಭಯಭ್ರಾಂತನಾಗಿ ಕಾಳೀವರ್ಮನನ್ನು ಪರೀಕ್ಷಿಸಿ ನೋಡುತ್ತ, "ಓ ಶಿಷ್ಯೋಪಶಿಷ್ಯರೇ! ನಾವು ಅಷ್ಟೇನೂ ಹೆದರ

ಬೇಕಾಗಿಲ್ಲವೆಂದೇ ಕಾಣುತ್ತದೆ. ಬರುವವನು ಯಕ್ಷನ ಹಾಗಿಲ್ಲ. ಯಕ್ಷರು ಗಿಡ್ಡಗಾಗಿರುತ್ತಾರೆ. ಯಕ್ಷರ ರೋಮಗಳಿಂದ ಕಿರಣ ಹೊರಡುತ್ತಿರುತ್ತದೆಂದು ನನ್ನ ಗುರುಗಳಿಂದ ಕೇಳಿದ್ದೇನೆ. ಇವನು ಸಾಧಾರಣ ಮನುಷ್ಯನೇ. ನಮ್ಮ ಮಂತ್ರದಂಡದಿಂದ ನೆಲವನ್ನೇ ಒಡೆದಿರುವಾಗ, ಇವನ ತಲೆ ಒಡೆಯುವುದೊಂದು ಕಷ್ಟವೇ? ಹೆದರಿ ಕೈಕಾಲುಗೆಟ್ಟು ಏನಾದರೂ ಮಾಡಿ ಕೊಂಡು ಬಿಡಬೇಡಿ." ಎಂದನು.

ಆಗಲೇ ಕಾಳೀವರ್ಮನು ವೇಗವಾಗಿ ಅವರ ಬಳಿಗೆ ಬಂದು, "ಓಯ್! ಬೈರಾಗಿಗಳೇ! ನಿಮ್ಮ ಸಂಗತಿ ಪೂರಾ ನನಗೆ ಗೊತ್ತು. ಈ ಕತ್ತಿ ನೀವು ಕದ್ದಿರುವ ಮಂತ್ರದಂಡಕ್ಕಿಂತಲೂ ಹೆಚ್ಚು ಶಕ್ತಿಯುಳ್ಳ ಮಂತ್ರದ ಕತ್ತಿ. ಪರೀಕ್ಷಿಸಿ ನೋಡುವಿರಾ?" ಎಂದು ಕತ್ತಿ ಯನ್ನು ಕುಣಿಸಿದನು.

ಕತ್ತಿಯ ಸುಂಯ್ಯೆನ್ನುವದವನ್ನೂ ತಳತಳಿಕೆಯನ್ನೂ ನೋಡಿ ಬೈರಾಗಿ ಶಿಷ್ಯರಿಬ್ಬರೂ ಇನ್ನಷ್ಟು ಹೆದರಿ, "ಗುರುಗಳೇ! ಬೇಗ ಮಂತ್ರವನ್ನು ಜಪಿಸಿ ಅವನನ್ನು ಭಸ್ಮಮಾಡಿಬಿಡಿ!" ಎಂದರು.

ಗುರುಬೈರಾಗಿ ಒಳಗೊಳಗೇ ಹೆದರುತ್ತ, ಮಂತ್ರ ದಂಡವನ್ನು ಎತ್ತಿ, ಏನೋ ಮಂತ್ರವನ್ನು ಜಪಿಸಿದನು. ಅದರಿಂದೇನೂ ಮಹಿಮೆ ಹೊರಡಲಿಲ್ಲ. ಅಷ್ಟರಲ್ಲೇ ಕಾಳೀವರ್ಮ ಅವನ ಗುಂಡಿಗೆಗೆ ಕತ್ತಿಯ ಮೊನೆ ಯನ್ನು ಆನಿಸಿ, "ಲೋ ಹುಚ್ಚು ಬೈರಾಗೀ! ಆ ಮಂತ್ರದಂಡವು ಅದರ ಯಜಮಾನನೊಬ್ಬನ ಮಾತು ಮಾತ್ರವೇ ಕೇಳುವಂಥಾದ್ದು. ನೀನು ಅದರ ಪರೀಕ್ಷೆಗೆ ಹೋಗಿ ಅವಮಾನ ಬೇರೆ ಮಾಡಿದ್ದೀಯೇ! ಅದನ್ನೀಗ ನನ್ನ ಕೈಗೆ ಕೊಡುವಿಯಾ, ಕತ್ತಿಯನ್ನು ನಿನ್ನ ಎದೆಯೊಳಗೆ ಇಳಿಸಿಬಿಡಲೆ?" ಎಂದನು ಕಣ್ಣು ತಿರುಗಿಸುತ್ತ.

ಗುರು ಬೈರಾಗಿ ಕೊಡಲೇ ಬಿಡಲೇ ಎಂದು ತಟಪಟಾಯಿಸುವುದನ್ನು ನೋಡಿ ಶಿಷ್ಯರಿಬ್ಬರೂ



ಒಂದೇ ಕಂಠದಿಂದ, "ಗುರುವೇ! ಕೊಟ್ಟುಬಿಡ್ರೀ!" ಎಂದರು. ಆ ಮೇಲೆ ಎರಡನೇ ಶಿಷ್ಯ, "ನಮಗೇಕೇ? ಅದಕ್ಕೆ ಮಹತ್ವವೇನಾದರೂ ಇರುತ್ತಿದ್ದರೆ ಇಷ್ಟ ರೊಳಗೇ ನಮ್ಮನ್ನು ಕಾಪಾಡಬೇಕಿತ್ತು. ನಮ್ಮ ಪಾಲಿಗೆ ಅದು ಚಳಿ ಕಾಯಿಸುವ ಬೆಂಕಿಗೆ ಮಾತ್ರ ಉಪಯೋಗವಾದೀತು" ಎಂದನು.

ಗುರುಬೈರಾಗಿ ಧೈರ್ಯ ತಂದುಕೊಂಡು, "ಚೆನ್ನಾಗಿ ಹೇಳಿದಿರಿ ಶಿಷ್ಯೋಪಶಿಷ್ಯರೇ!" ಎಂದು ಗಂಭೀರ ವಾಗಿ ಹೇಳಿ, ಕಾಳೀವರ್ಮನಿಗೆ ಮಂತ್ರದಂಡವನ್ನು ಕೊಡುತ್ತ, "ವೀರ ಯುವಕಾ! ನಿನ್ನ ಸಾಹಸ ಪ್ರತಾಪ ನೋಡಿ ತುಂಬಾ ಮೆಚ್ಚಿದೆನು! ಈ ಮಂತ್ರ ದಂಡವನ್ನು ಎತ್ತಿಕೊಂಡು ಹೋಗಿ, ಜಿತಕೇತು ರಾಜನ ದತ್ತ ಪುತ್ರಿಯನ್ನು ಮದುವೆಮಾಡಿಕೊಂಡು ನೂರು ವರ್ಷ ಚಂದ್ರಶಿಲಾ ನಗರವನ್ನು ಪಾಲಿಸು ವಂಥವನಾಗು! ಇದೇ ನಾನು ನಿನಗೆ ಮಾಡುವ ಶುಭಾಶೀರ್ವಾದ!" ಎಂದನು.



"ಆದರೆ ನನ್ನ ಉದ್ದೇಶ ಈ ಸುರಂಗವು ರಾಜನ ಆವರಣದೊಳಗಿನಿಂದ ಆಪತ್ಕಾಲದಲ್ಲಿ ಶತ್ರುಗಳಿಗೆ ಸಿಕ್ಕದಂತೆ ತಪ್ಪಿಸಿಕೊಳ್ಳಲು, ಈಗ ಇರುವ ರಾಜನ ವಂಶದವರು ತೋಡಿಸಿದ ಕಳ್ಳ ದಾರಿಯಾಗಿರಬೇಕು. ಆದರೆ ನೀನು ಹೇಳುವ ಹಾಗೆ ಇಲ್ಲಿ ಏನಾದರೂ ನಿಧಿ ನಿಕ್ಷೇಪ ಇದ್ದರೆ, ಅವುಗಳನ್ನು ನೀವು ತೆಗೆದು ಕೊಂಡು ಹೋಗಲು ನನ್ನಿಂದ ಯಾವ ಅಡ್ಡಿಯೂ ಇಲ್ಲ. ಈಗ ನನ್ನೊಂದಿಗೆ ಈ ಸುರಂಗಮಾರ್ಗದಲ್ಲಿ ಮೂವರೂ ಬರುವಿರಾ ಹಾಗಾದರೆ?" ಎಂದು ಕೇಳಿದನು ಕಾಳೀವರ್ಮ.

ಗುರುಬೈರಾಗಿ ಶಿಷ್ಯರೊಂದಿಗೆ ಅತ್ಯಾನಂದದಿಂದ, "ಆಹಾ! ವೀರ ಯುವಕಾ! ನಿನ್ನ ಮಾತಿನಂತೆಯೇ ಆಗಲಿ. ಮುಂದಿನಿಂದ ನೀನೇ ನಡೆ! ನಿನ್ನ ಹಿಂದೆಯೇ ನಾವು ಬರುತ್ತೇವೆ!" ಎಂದನು.

ಎಲ್ಲರೂ ಕೂಡಿ ದೂರದಲ್ಲಿ ಕಾಣುವ, ಸಣ್ಣ ಬೆಳಕಿನ ಪ್ರದೇಶವನ್ನು ಗುರಿಯಿಟ್ಟುಕೊಂಡು ನಿಶ್ಶಬ್ದ ವಾಗಿ ನಡೆದರು. ಆ ಸ್ಥಳದಲ್ಲಿ ಸುರಂಗ ಮಾರ್ಗವು ಅಂತ್ಯವಾಗಿ ಮೇಲಿನಿಂದ ಕಲ್ಲು ಹಲಗೆಯ ಸಂದಿನಿಂದ ಆ ಪ್ರಕಾಶವು ಬೀಳುತ್ತಿತ್ತು.

ಅಲ್ಲಿ ನಿಂತು ಕಾಳೀವರ್ಮನು ಬೈರಾಗಿಗಳೊಂದಿಗೆ, ನಾವೀಗ ಮೇಲೆ ಮುಚ್ಚಿರುವ ಕಲ್ಲು ಹಲಗೆಯನ್ನು ಎತ್ತಿಬಿಟ್ಟರೆ ಮೇಲೆ ಸೇರಿಬಿಡಬಹುದು. ಬಹುಃಶ ಅದು ರಾಜಭವನದ ಆವರಣವೇ ಇರಬಹುದು. ಇಲ್ಲಿರುವ ಮೆಟ್ಟಲಲ್ಲಿ ನಿಂತು ಒಂದು ಕೈ ಕೊಡಿರಿ ನೋಡುವಾ" ಎಂದನು.

ಎಲ್ಲರೂ ಕೂಡಿ ಮೇಲಿನ ಕಲ್ಲು ಹಲಗೆಯನ್ನು ಎತ್ತಿ ಬದಿಗೆ ದೂಡಿದರು. ಕೂಡಲೇ ಸುರಂಗದೊಳಗೆ ಸೂರ್ಯನ ಪ್ರಕಾಶವು ಬಿದ್ದು ಜಗಜಗವಾಯಿತು. ಮೇಲೆ ಕಲ್ಲಿನ ಹಲಗೆಯನ್ನು ಮುಚ್ಚಿಕೊಂಡಿದ್ದ ಮಣ್ಣು ಮತ್ತು ಹೂವಿನ ಗಿಡಗಳು ಚಿಕ್ಕ ಚಿಕ್ಕ ಶಬ್ದ ದೊಂದಿಗೆ ಬದಿಗೆ ಬಿದ್ದುವು.

ಕಾಳೀವರ್ಮನು ಅವನ ಮಾತು ಕೇಳಿ ನಗುತ್ತ, ಮಂತ್ರದಂಡವನ್ನು ತೆಗೆದುಕೊಂಡು ಮುಂದೆ ಹೋಗಲೋ, ಹಿಂದೆ ಹೋಗಲೋ ಎಂದು ಆಲೋಚಿಸಿದನು. ಆಗ ಗುರು ಬೈರಾಗಿ ಅವನ ಕಿವಿಯ ಹತ್ತಿರ ಮುಖ ತಂದು, ಗುಟ್ಟು ಹೇಳುವವನಂತೆ, "ವೀರ ಯುವಕಾ! ಇಲ್ಲಿ ಸಿಗುವ ನಿಧಿಯಲ್ಲಿ ನಮಗೂ ಸ್ವಲ್ಪ ಭಾಗ ಕೊಟ್ಟರೆ ಧರ್ಮಸಮ್ಮತವಾಗಿರುತ್ತದೆಂದು ಹೇಳಬಹುದಷ್ಟೆ?" ಎಂದನು.

ಗುರುಬೈರಾಗಿಯ ಈ ಮಾತು ಕೇಳಿ ಕಾಳೀವರ್ಮನಿಗೆ ಮಿಂಚಿನಂತೆ ಒಂದು ಆಲೋಚನೆ ಬಂತು. ಅವನು ಬೈರಾಗಿಯನ್ನು ಪರೀಕ್ಷಿಸಿ ನೋಡಿ, "ಪಾಪ! ನೀವು ಈ ಸುರಂಗದಲ್ಲಿ ಏನೋ ನಿಧಿ ಇರಬೇಕೆಂದು ಆಶೆಪಟ್ಟು ಬಂದಿರುವ ಹಾಗಿದೆ..." ಎನ್ನಲು, ಗುರು ಬೈರಾಗಿ ನಗುತ್ತ, "ಆಶೆ ಬಿಟ್ಟ ಮನುಷ್ಯರಾರಪ್ಪಾ? ಮುಖ್ಯವಾಗಿ ದುರಾಶೆಯೂ ಅತ್ಯಾಶೆಯೂ ಒಳ್ಳೆಯದಲ್ಲ ಅಷ್ಟೇ." ಎಂದನು.

ಮೊದಲು ಕಾಳೀವರ್ಮನು ಮೇಲೆ ಹತ್ತಿ, ಸುತ್ತಲೂ ಒಂದುಸಾರಿ ತಲೆ ತಿರುಗಿಸಿ ನೋಡಿದನು. ಅದು ಸುಂದರವಾದ ಉದ್ಯಾನವನವಾಗಿರುವುದು ಗೊತ್ತಾಯಿತು. ಅದರಾಚೆಗಿರುವ ರಾಜ ಸೌಧಗಳನ್ನು ನೋಡಿ, ಇದು ಅರಮನೆಗೆ ಸೇರಿದ ಉದ್ಯಾನವೆಂದೂ ತಿಳಿಯಿತು.

ಅನಂತರ ಅವನು ಸೈಗೆ ತೋರಿಸಿದ ಕೂಡಲೇ ಮೂವರು ಬೈರಾಗಿಗಳೂ ಮೇಲೆ ಬಂದರು, "ಆಹಾ! ಏನು ಸೌಂದರ್ಯ ಬೀರುವ ಉದ್ಯಾನವಿದು! ಬಹಳ ಬುದ್ಧಿವಂತನಪ್ಪಾ ನೀನು! ನೀನು ಊಹಿಸಿದಂತೆ ಯಾವುದೋ ರಾಜನ ಉದ್ಯಾನವೇ! ಯಾವುದೋ ರಾಜನೆಲ್ಲಿ ಬಂದ? ಜಿತಕೇತು ರಾಜನದೇ ಇದ್ದೀತು!" ಎಂದನು ಗುರು ಬೈರಾಗಿ.



ಕಾಳೀವರ್ಮನು ಬಾಯಿಗೆ ಕೈಯಿಟ್ಟು ಮೆಲ್ಲಗೆ ಮಾತಾಡುವಂತೆ ಎಚ್ಚರಿಸಿ, "ನಾವೀಗ ತುಂಬಾ ಅಪಾಯಕಾರೀ ಪ್ರದೇಶದಲ್ಲಿದ್ದೇವೆ. ನನಗೇನೂ ಪ್ರಾಣದ ಮೇಲೆ ಅಂಥಾ ಪ್ರೀತಿ ಏನಿಲ್ಲಾನ್ನಿ. ರಾಜ ಭಟರು ಬಂದು ಮುತ್ತಿಕೊಂಡರೆ ಜೀವದೊಂದಿಗೆ ಸಿಕ್ಕಿ ಬೀಳುವವನಲ್ಲ ನಾನು. ಆದರೆ ನಿಮ್ಮ ಸಂಗತಿ ಹೇಗೋ ನಾನರಿಯೆ! ನಿಧಿಯ ಆಶೆ ಇದ್ದವರಿಗೆ ಜೀವದ ಆಶೆಯೂ ಹೆಚ್ಚಾಗಿಯೇ ಇದ್ದೀತು! ಅದಕ್ಕೆ ತಕ್ಕ ಶಕ್ತಿ ಸಾಮರ್ಥ್ಯಗಳೂ ಇರಬೇಕಲ್ಲ? ಏನೆನ್ನು ವಿರಿ?" ಎಂದನು.

ಆ ಮಾತು ಕೇಳಿ ಗುರುಬೈರಾಗಿಯ ಮುಖವು ಭಯದಿಂದ ಕಪ್ಪಿಟ್ಟಿತು. "ನಾವೇನೋ ಮಂತ್ರ ಪೂಜೆ ಮೊದಲಾದ ವಿಧಿ ನಿಯಮ ಬಲ್ಲವರೇ ಹೊರತು ಜಗಳಾ ತಂಟೆಗೆ ಹೋಗುವವರಲ್ಲಪ್ಪಾ. ತಪಃಸಿದ್ಧಿ ಪಡೆದವರೂ ಅಲ್ಲ. ಬೇರೆ ದಾರಿಯಿಲ್ಲದೆ ಹೀಗೆ ತಿರುಗಾಟದ ಜೀವನ ನಡೆಸುತ್ತಿದ್ದೇವೆ. ಅನ್ಯಾಯವಾಗಿ ಸಾಯಲು ನಾವು ಸಿದ್ಧರಿಲ್ಲವಲ್ಲಾ! ಸುರಂಗದಲ್ಲಿ ನಿಧಿ ನಿಕ್ಷೇಪಗಳೂ ಇಲ್ಲವೆಂದಾಯಿತು. ನಾವು ನಿನ್ನ ಹಿಂದೆ ಬಂದದ್ದೇ ತಪ್ಪೋ ಏನೋ? ನೀನು ಅನುಮತಿ ಕೊಟ್ಟರೆ ನಮ್ಮ ಪಾಡಿಗೆ ನಾವು ತಪ್ಪಿಸಿಕೊಂಡು ಓಡಿ ಹೋಗಿಬಿಡುತ್ತೇವೆ" ಎಂದನು.

ಮಂತ್ರದಂಡ ಕೈ ಸೇರಿದುದರಿಂದ, ಆ ಬಡ ಬೈರಾಗಿಗಳಿಂದ ಕಾಳೀವರ್ಮನಿಗೆ ಇನ್ನು ಆಗಬೇಕಾದುದೇನಿಲ್ಲ. ಹೋಗುವವರನ್ನು ತಾನೇಕೆ ತಡೆಯಬೇಕೆಂದು ಕೊಂಡು, "ನೀವು ಹೋಗಲು ನನ್ನಿಂದೇನೂ ಅಡ್ಡಿ ಯಿಲ್ಲ" ಎಂದನು ಕಾಳೀವರ್ಮ.

ಬೈರಾಗಿಗಳು ಯಾವ ದಿಕ್ಕಿಗೆ ಓಡುವುದೆಂದು ಆಚೀಚೆ ನೋಡುತ್ತಿರಲು, ಶಿಷ್ಯ ಬೈರಾಗಿಯೊಬ್ಬ ಸುರಂಗದೊಳಗೆ ಹಾರಿ ಹೋಗೋಣವೆಂದು ಸನ್ನೆ ಮಾಡಿದ್ದನು.

ಆಗಲೇ ಜಿತಕೇತು ರಾಜನು ಮಾಯಾಮರ್ಕಟ ಮಂತ್ರಿಯೊಂದಿಗೆ ಮಾತಾಡುತ್ತಾ ಈ ಕಡೆಗೆ ಬರುವುದು ಕಾಣಿಸಿತು. ಕಾಳೀವರ್ಮನು ತಟ್ಟನೆ ಹೂಗಿಡಗಳ ಹೊದರಿನ ಮರೆಯಲ್ಲಿ ಅಡಗುತ್ತ,

"ಬೈರಾಗಿಗಳೇ! ಸದ್ಯ ಅಡಗಿಕೊಳ್ಳಿ! ಒಂದುವೇಳೆ ನೀವು ಆ ಬರುವವರ ಕೈಗೆ ಸಿಕ್ಕಿಬಿದ್ದರೆ ಹೆದರಬೇಡಿ. ಕಳೆದುಹೋದ ಮಂತ್ರದಂಡವನ್ನು ಯಾವ ಬೋಳಪ್ಪನ ಕೈಯಲ್ಲಿಯೋ ನೋಡಿದೆವೆಂದೂ, ಆ ಸಂಗತಿಯನ್ನು ಗುಟ್ಟಾಗಿ ಹೇಳಲಿಕ್ಕೆ ಹೀಗೆ ಅಡಗಿ ಬಂದೆವೆಂದೂ ಹೇಳಿಬಿಡಿ. ಆ ಮೇಲೆ ಏನು ನಡೆಯುವುದೋ ನೋಡೋಣ" ಎಂದನು.

ಹೀಗೆ ಕಾಳೀವರ್ಮನು ಹೇಳಿ ಮುಗಿಸುವಷ್ಟರಲ್ಲಿ ಎಲ್ಲಿಯೋ ದೂರದಿಂದ ಶಂಖನಾದವು ಕೇಳಿಸ ತೊಡಗಿತು. ಅದರ ವಿಚಿತ್ರವಾದ ನಾದ ಗತಿಯನ್ನು ನೋಡಿ, ಮಾಯಾಮರ್ಕಟನು ಒಮ್ಮೆಗೇ ಚುರುಕಾಗಿ, ಪಕ್ಕದಲ್ಲಿದ್ದೊಂದು ಮರದ ಕೊಂಬೆಯ ಮೇಲೇರಿ, "ಅಹೋಯ್! ತಾಂತ್ರಿಕ ಗುರೋ! ನೀವು ಶಂಖ ಊದುವುದು ಕೋಟೆಯೊಳಗೋ, ಹೊರಗಿನಿಂದಲೋ?" ಎಂದು ತೀಕ್ಷ್ಣ ಕಂಠಸ್ವರದಿಂದ ಕೂಗಿದನು. ಅವನ ಕೂಗು ದಿಕ್ಕುಗಳಲ್ಲಿ ಪ್ರತಿಧ್ವನಿಸುವಂತಿತ್ತು.

ಶಂಖನಾದವು ನಿಂತುಹೋಯಿತು. ಮಾಯಾಮರ್ಕಟನು ಮರದ ಕೊಂಬೆಯಿಂದ ಕೆಳಗೆಹಾರಲು ನೋಡುವಾಗ, ಭಯದಿಂದ ದಿಕ್ಕುಗಳನ್ನು ನೋಡುತ್ತಿರುವ ಮೂವರು ಬೈರಾಗಿಗಳನ್ನು ನೋಡಿದನು. ಕೂಡಲೇ ದೊಡ್ಡದನಿಯಿಂದ ಕೀಚು ಗರ್ಜನೆ ಹಾಕಿ, "ಜಿತುಕೇತು ಮಹಾರಾಜಾ! ಇದು ನಿನ್ನ ರಾಜೋದ್ಯಾನವೇನಾ? ಬಾವಾ ಬೈರಾಗಿಗಳ ಮಠವೋ? ಭಟರನ್ನು ಕರೆದು ಕೂಡಲೇ ಆ ಪೊದರಿನ ಮರೆಯಲ್ಲಿರುವ ಬೈರಾಗಿಗಳನ್ನು ಬಂಧಿಸು. ಅವರು ತಪ್ಪಿಸಿಕೊಂಡು ಹೋಗಲು ತಡಕಾಡುತ್ತಿದ್ದಾರೆ! ಬಿಡಬಾರದು. ಜೋಕೆ!" ಎಂದು ಹೇಳಿ ನೆಲಕ್ಕೆ ಧುಮುಕಿದನು.

ಜಿತಕೇತುರಾಜನು ದೊಡ್ಡ ದೊಡ್ಡ ನಾಲ್ಕು ಚಪ್ಪಾಳೆಗಳನ್ನು ತಟ್ಟಿದನು. ರಾಜಭಟರು ಓಡೋಡಿ ಬರತೊಡಗಿದರು. ರಾಜನು ಬೈರಾಗಿಗಳ ಬಳಿಗೆ ಬರುತ್ತ, "ಯಾರು ನೀವು? ವೇಷಧಾರಿಗಳು ತಾನೇ? ಯಾರ ಅನುಮತಿ ಕೇಳಿ ಈ ಉದ್ಯಾನದೊಳಗೆ ಪ್ರವೇಶಿಸಿದಿರಿ? ಏನು ನಿಮ್ಮ ಉದ್ದೇಶ? ಯಾವ ನನ್ನ ಶತ್ರು ನಿಮ್ಮನ್ನು ಕಳಿಸಿದ ಅಧಮ?" ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆ ಮಾಡಿದನು.

ಗುರುಬೈರಾಗಿ ಕೈಗಳನ್ನು ಮೇಲೆತ್ತಿ ಎಂಜಲು ನುಂಗಿ, "ನಿಮ್ಮ ಡಂಗುರ! ಮಂತ್ರದಂಡ... ಬೋಳಪ್ಪ...ಮಂತ್ರದಂಡ...ಅದು ಆ ಬೋಳಪ್ಪನ ಕೈಲಿ...ನಿಮಗೆ...ಗುಟ್ಟಾಗಿ ಬೇರೆ ದಾರಿ...ಬೋಳಪ್ಪನ ಕೈಲಿ ನೋಡಿದ್ದನ್ನು..." ಎಂದು ಕೂಗುತ್ತ ಮಾತುಗಳನ್ನು ಅಲ್ಲಲ್ಲಿ ನುಂಗುತ್ತ ಹೇಳ ತೊಡಗಿದನು.

—(ಇನ್ನೂ ಇದೆ)





# ಪಿತೃವಾಕ್ಯಪಾಲನೆ

ದಿನಾ ಬೆಳಿಗ್ಗೆ ಮೂಡಿಬರಲು ಸೂರ್ಯನಿಗೆ ಹೇಗೆ ಬೇಸರವಿಲ್ಲವೋ, ಹಾಗೆಯೇ ಬೇಸರವಿಲ್ಲದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಭುಜದ ಮೇಲೆ ಹಾಕಿಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವ ದೊಳಗಿನ ಬೇತಾಳವು ಮಾತಾಡಲು ತೊಡಗಿ, "ರಾಜಾ, ಏನೋ ಒಂದು ಉನ್ನತವಾದ ಆದರ್ಶತೆ ಗಾಗಿಯೇ ನೀನು ಇಂತಹ ಸಾಹಸಕ್ಕೆ ಇಳಿದಿರಬೇಕು. ಆದರೆ ಕೆಲವು ಆದರ್ಶತೆಯನ್ನು ಪಾಲಿಸಲು ದಕ್ಷತೆ ಕೂಡಾ ಇರಬೇಕಾಗುತ್ತದೆ. ಇಲ್ಲದಿದ್ದರೆ ಪಿತೃವಾಕ್ಯ ವನ್ನು ಪಾಲಿಸಲು ಸಾಧ್ಯವಾಗದೆ ಹೋದ ಶೇಖರನ ಗತಿಯೇ ಬರಬಹುದು ಗೊತ್ತಾ? ದಾರಿಯ ಶ್ರಮ ತಿಳಿಯದಂತೆ ಆ ಕಥೆಯನ್ನು ಕೇಳುತ್ತಾ ನಡೆ" ಎಂದು ಕಥೆಯನ್ನು ಪ್ರಾರಂಭಮಾಡಿತು :

ಶೇಖರನೆಂಬವನು ವಿದೇಹ ರಾಜ್ಯದ ಆಸ್ಥಾನ ದಲ್ಲಿರುವ ಒಬ್ಬ ಉನ್ನತ ಉದ್ಯೋಗಸ್ಥನ ಮಗ. ಅವನ ತಂದೆಯ ಹೆಸರು ವೈಶಾಖಿ. ವೈಶಾಖಿನಿಗೆ ಶೇಖರನೊಬ್ಬನೇ ಮಗ. ಹಾಗೆಯೇ ವಿದೇಹದ

ಬೇತಾಳಕಥೆಗಳು



“ಅಗತ್ಯವಾಗಿ ತೀರಿಸುತ್ತೇನೆ, ನಂಬಿರಿ. ಪಿತೃ ವಾಕ್ಯವನ್ನು ಪಾಲಿಸದ ಮಗನು ಮಗನೇ ಅಲ್ಲ. ನಿಮ್ಮ ಕೋರಿಕೆ ಎಂತಹುದಾದರೂ ನಿಃಶಂಕೆಯಿಂದ ಹೇಳಿರಿ” ಎಂದನು ಶೇಖರ.

“ನೀನು ಈ ವಿದೇಹ ರಾಜವಂಶವನ್ನೇ ನಿರ್ಮೂಲಿಸಬೇಕು” ಎಂದನು ವೈಶಾಖ.

ಶೇಖರನು ತಂದೆಯ ಮಾತು ಕೇಳಿ ಬೆರಗಾಗಿ ಬಿಟ್ಟನು. ತಂದೆಯ ಈ ಕೋರಿಕೆ ಅಪ್ಪಟ ಸ್ವಾಮಿ ದ್ರೋಹ, ರಾಜದ್ರೋಹ! ಅದನ್ನು ತೀರಿಸಲು ತಾನು ತನ್ನ ಕೈಯಿಂದ ಮಿತ್ರನಾದ ವಿಜಯಕುಮಾರ ನನ್ನು ಕೊಲ್ಲುವುದು ಮಿತ್ರದ್ರೋಹ!

“ಇದೇನು ಅಪ್ಪಾ? ಇಂತಹ ಕೋರಿಕೆಗೆ ಕಾರಣ ವೇನೋ ಇರಬೇಕಷ್ಟೆ? ಅದೇನೋ?” ಎಂದು ಕೇಳಿದನು ಶೇಖರ.

“ವಿದೇಹರಾಜನು ನನಗೆ ಯಜಮಾನನಾಗಿರ ಬಹುದು, ಅದಕ್ಕಾಗಿ ತುಂಬಿದ ಸಭೆಯಲ್ಲಿ ಒಂದು ಸಾರಿ ಅವಮಾನ ಪಡಿಸಿದ್ದಾನೆ. ಮತ್ತಾವುದೋ ನೆಪ ಹಿಡಿದು ನನ್ನ ಮೇಲೆ ಕಠಿಣ ಕ್ರಮ ಕೈಕೊಂಡು ಶಿಕ್ಷಿಸಿದ್ದಾನೆ. ಈ ರಾಜನ ವಂಶವೇ ಅಂತವಾದ ಹೊರತು ನನ್ನ ಆತ್ಮಕ್ಕೆ ಶಾಂತಿ ಸಿಗದು. ನೀನು ನನ್ನ ಮಗನಾಗಿದ್ದರೆ ನನ್ನ ಈ ಕೊನೆಯ ಕೋರಿಕೆ ಯನ್ನು ತೀರಿಸುವೆನೆಂದು ಮಾತು ಕೊಡು. ಪ್ರಮಾಣ ಮಾಡು. ನಾನು ನಿಶ್ಚಿಂತೆಯಿಂದ ಸಾಯುತ್ತೇನೆ” ಎಂದನು ವೈಶಾಖ.

ತಂದೆಯ ಕೊನೆಯ ಕೋರಿಕೆಯನ್ನು ತೀರಿಸುವೆ ನೆಂದು ಶೇಖರನು ಮನಸ್ಸು ಗಟ್ಟಿಮಾಡಿಕೊಂಡು ಸತ್ಯ ಪ್ರಮಾಣಮಾಡಿದನು. ವೈಶಾಖನು ನೆಮ್ಮದಿ ಯಿಂದ ಪ್ರಾಣ ಬಿಟ್ಟನು.

ತಂದೆಯ ತರುವಾಯ ಶೇಖರನಿಗೆ, ರಾಜನ ಆಸ್ಥಾನದಲ್ಲಿ ತಂದೆ ಮಾಡಿದ ಉದ್ಯೋಗವೇ ಸಿಕ್ಕಿತು. ಅದೇ ಸಮಯದಲ್ಲಿ ವಿದೇಹರಾಜನೂ ವೃದ್ಧಾಪ್ಯದ

ರಾಜನಿಗೆ ಕೂಡಾ ವಿಜಯನೆಂಬ ಒಬ್ಬನೇ ಮಗನಿದ್ದ. ವಿಜಯನೂ ಶೇಖರನೂ ಹತ್ತಿರ ಹತ್ತಿರ ಒಂದೇ ಪ್ರಾಯದವರಾಗಿ ಬಾಲ್ಯ ಸ್ನೇಹಿತರಾಗಿದ್ದರು. ಒಬ್ಬನೇ ಗುರುವಿನ ಹತ್ತಿರ ಇಬ್ಬರೂ ವಿದ್ಯೆಗಳನ್ನು ಕಲಿತು, ಒಬ್ಬ ತಂದೆ ಮಕ್ಕಳಂತೆಯೇ ಬೆಳೆದರು. ವಿಜಯಕುಮಾರನು ಯುವರಾಜನಾಗಿದ್ದರೂ, ಶೇಖರ ನನ್ನು ತನ್ನೊಂದಿಗೆ ಸಮಾನನೆಂದೇ ಭಾವಿಸಿ ನಡೆದು ಕೊಳ್ಳುತ್ತಿದ್ದನು.

ಹೀಗಿರುವಾಗ ಶೇಖರನ ತಂದೆ ಕಾಯಿಲೆ ಬಿದ್ದು, ಅದು ಹೆಚ್ಚಾಗುತ್ತ ಮರಣದ ಅಂಚಿಗೇ ತಲಪಿದನು. ಸಾಯುವ ಮೊದಲು ತನ್ನ ಮಗ ಶೇಖರನನ್ನು ಕರೆದು ಗುಟ್ಟಾಗಿ “ಮಗನೇ, ನಾನಿನ್ನು ಬದುಕಲಾರೆ, ಸಾಯುತ್ತೇನೆ. ನೀನು ನಿನ್ನ ತಂದೆಯ ಋಣವನ್ನು ತೀರಿಸಿಕೊಳ್ಳಬೇಕಾದರೆ ನನ್ನದೊಂದು ಕೋರಿಕೆ ತೀರಿಸ ಬೇಕು. ತೀರಿಸುತ್ತೇನೆಂದು ಮಾತು ಕೊಡುವಿಯಾ?” ಎಂದು ಕೇಳಿದನು.

ಅಶಕ್ತತೆಯಿಂದಾಗಿ, ತನ್ನ ಮಗನಾದ ವಿಜಯಕುಮಾರ ನಿಗೆ ರಾಜ್ಯ ಭಾರವನ್ನು ಒಪ್ಪಿಸಿಕೊಟ್ಟು, ತಾನು ವಿಶ್ರಾಂತಿಯಾಗಿ ಅಂತಃಪುರದಲ್ಲಿರ ತೊಡಗಿದನು.

ಈಗ ಶೇಖರನು ತನ್ನ ಕೈ ಕೆಳಗಿನ ಒಬ್ಬ ಉದ್ಯೋಗಸ್ಥನಾದರೂ, ವಿಜಯನು ಅವನನ್ನು ಮಿತ್ರನೆಂದೇ ಭಾವಿಸುತ್ತ, ಬೇಟೆಗೆ ಹೋಗುವಾಗಲೂ, ವಾಹ್ಯಾಳಿಗೆ ಹೋಗುವಾಗಲೂ ಶೇಖರನನ್ನು ತನ್ನೊಂದಿಗೆ ಕರೆದುಕೊಂಡು ಹೋಗುತ್ತಲೇ ಇದ್ದನು. ರಾಜ ಕಾರ್ಯಗಳು ಮುಗಿದ ಕೂಡಲೇ ಅವರು ಯಜಮಾನ ಸೇವಕರಂತಿರದೆ, ಆಪ್ತಮಿತ್ರರಂತೆಯೇ ನಡೆದುಕೊಳ್ಳುತ್ತಿದ್ದರು.

ಮನಸ್ಸಿನೊಳಗೆ ವಿಜಯಕುಮಾರನಲ್ಲಿ ಯಾವ ವ್ಯತ್ಯಾಸವೂ ಇರದಿದ್ದರೂ, ಶೇಖರನ ಮನಸ್ಸು ಕ್ರಮೇಣ ವ್ಯತ್ಯಾಸಕ್ಕೆ ತಿರುಗ ತೊಡಗಿತು. ತಂದೆಗೆ ತಾನು ಕೊಟ್ಟ ಮಾತನ್ನು ಕಾಪಾಡಲಿಕ್ಕಾಗಿ ರಾಜ ವಂಶವನ್ನು ನಿರ್ಮೂಲಿಸಬೇಕಾದುದು ತನ್ನ ಕರ್ತವ್ಯ ವಾಗಿದೆ. ಇನ್ನೂ ಮದುವೆಯಾಗದಿರುವ ಈ ವಿಜಯ ಕುಮಾರನನ್ನು ಮಾತ್ರ ಕೊಂದುಬಿಟ್ಟರೇ ಸಾಕು. ರಾಜ ವಂಶದ ಸಂತಾನವೇ ನಿರ್ಮೂಲವಾಗಿ ಬಿಡುತ್ತದೆ. ಬೇರೆ ಆ ವಂಶದ ವಾರಸರೂ ಇಲ್ಲ. ಇನ್ನು ಹುಟ್ಟುವಂತೆಯೂ ಇಲ್ಲ. ಆದುದರಿಂದ ಸಂದರ್ಭ ನೋಡಿ ವಿಜಯನನ್ನು ಕೊಲ್ಲಲು ಶೇಖರನು ತನ್ನ ಮನಸ್ಸನ್ನು ಸಿದ್ಧಪಡಿಸಿಕೊಳ್ಳುತ್ತಾ ಇದ್ದನು.

ಒಂದು ಸಾರಿ ವಿಜಯಕುಮಾರನು ಎಂದಿನಂತೆ ಬೇಟೆಗೆ ಹೊರಟು, ಶೇಖರನನ್ನು ತನ್ನೊಂದಿಗೆ ಕರೆದೊಯ್ದನು. ಬೇಟೆಯಾಡುತ್ತಾ ಓಡಾಡುವಾಗ, ಅರಣ್ಯದೊಳಗೆ ಒಂದು ಸಂದರ್ಭದಲ್ಲಿ ಸ್ನೇಹಿತರಿಬ್ಬರೂ ಭಟರಿಗೆ ದೂರವಾಗಿ ಹೋದರು. ಈ ಸಂದರ್ಭವನ್ನು ಬಿಡಬಾರದೆಂದು ಗಟ್ಟಿಮಾಡಿ ಶೇಖರನು ವಿಜಯನನ್ನು ಕತ್ತಿಯಿಂದ ಬೆನ್ನಿಗೆ ತಿವಿಯಲು ಸಿದ್ಧನಾದನು.

ಅದೇ ಹೊತ್ತಿಗೆ ಭಟರು ಬಂದುಬಿಟ್ಟರು. ಶೇಖರನ ಪ್ರಯತ್ನವು ಕೊನೆಸಾಗದೆ ಹೋಯಿತು. ಇದು ಯಾರಿಗೂ ಗೊತ್ತಾಗಲೂ ಇಲ್ಲ.





ಮತ್ತೊಂದು ಸಾರಿ ವಿಜಯಕುಮಾರನೂ ಶೇಖರನೂ ನಗರದ ಹೊರಗೆ ಬೆಟ್ಟಗಳ ಕಡೆಗೆ ವಾಹ್ಯಾಳಿಗೆ ಹೊರಟರು. ಅಲ್ಲೆಲ್ಲಾ ಅನೇಕ ಪ್ರಕೃತಿ ಸೌಂದರ್ಯದ ದೃಶ್ಯಗಳಿದ್ದುವು. ನೋಡುತ್ತಿದ್ದರೆ ಹೊತ್ತು ಹೋಗುವುದೇ ತಿಳಿಯದು. ಮಿತ್ರರಿಬ್ಬರೂ ಸಾವಕಾಶವಾಗಿ ಗುಡ್ಡವನ್ನೇರುತ್ತ ಹೋದರು. ಆ ಬೆಟ್ಟದ ಆಚೆಯ ಪಕ್ಕದಲ್ಲಿ ಪಾತಾಳದಂತಹ ಕಣಿವೆಯಿದ್ದಿತು. ಆ ಭಾಗದಲ್ಲಿ ಗುಡ್ಡ ನಿಟಾರಾಗಿದ್ದುದರಿಂದ ಕಾಲು ಜಾರಿಬಿಟ್ಟರೆ, ನೆಟ್ಟಗೆ ಪಾತಾಳಕ್ಕೇ ಬೀಳುವಂತಿತ್ತು. ಬದಿಯಲ್ಲಿ ಜಾಗರೂಕತೆಯಿಂದ ನಿಂತು ಪಾತಾಳವನ್ನು ದರ್ಶನಮಾಡಿ ಆನಂದಿಸಲು ಅಡ್ಡಿ ಇರಲಿಲ್ಲ. ಈ ಮೊದಲು ಸ್ನೇಹಿತರಿಬ್ಬರೂ ಅನೇಕಬಾರಿ ಅಲ್ಲಿಗೆ ಬಂದು, ಪಾತಾಳ ದರ್ಶನಮಾಡಿ ಆನಂದಿಸಿದ್ದರು.

ಈ ಸಾರಿ ಕರ್ತವ್ಯ ತೀರಿಸಿ ಬಿಡಬೇಕೆಂಬ ನಿರ್ಧಾರದಲ್ಲಿ ಶೇಖರನು ವಿಜಯನನ್ನು ಆ ಬೆಟ್ಟದ ಅಂಚಿಗೆ ಕರೆದುಕೊಂಡು ಹೋದನು. ಅಲ್ಲಿಂದ ವಿಜಯನನ್ನು ದೂಡಿಬಿಟ್ಟರೆ ಶವದ ಗುರುತು ಹಿಡಿಯಲಿಕ್ಕೂ ಸಾಧ್ಯವಾಗುವಂತಿಲ್ಲ. ಅವನನ್ನು ದೂಡಿ ತಾನು ಬೆಟ್ಟದ ಕೆಳಗಿನ ಮರದ ಬುಡದಲ್ಲಿ ಮಲಗಿಬಿಡಬೇಕು. ತನ್ನ ಪಕ್ಕದಲ್ಲಿ ಮಲಗಿದ್ದ ವಿಜಯನು ಎಲ್ಲಿ ಹೋದನೆಂದು ಕರೆಯುತ್ತಾ ಹುಡುಕುತ್ತಾ ಇದ್ದು ನಟಿಸಿದರೆ, ಯಾರಿಗೂ ತನ್ನ ಮೇಲೆ ಸಂದೇಹ ಬರುವಂತಿಲ್ಲ. ಒಂದುವೇಳೆ ಪಾತಾಳ ಕಣಿವೆಯಲ್ಲಿ ಅವನ ಶವ ಸಿಕ್ಕಿದರೂ, ಅವನಾಗಿಯೇ ಕಾಲು ಜಾರಿಬಿದ್ದಂತಾಗುತ್ತದೆ. ಹೀಗೆ ನಿಶ್ಚಯಿಸಿಕೊಂಡು ಶೇಖರನು, ಬೆಟ್ಟದಂಚಿನಲ್ಲಿ ನಿಂತಿದ್ದ ವಿಜಯನನ್ನು ದೂಡಲು ಮುಂದಡಿ ಇಟ್ಟನು.

ವಿಜಯನು ತಟ್ಟನೆ ಹಿಂದಕ್ಕೆ ಬಂದು, "ಮಿತ್ರಾ, ಇದು ಎಷ್ಟಾದರೂ ಅಪಾಯಕಾರಿಯಾದ ಜಾಗೆ. ಹೆಚ್ಚು ನಿಲ್ಲಬಾರದು. ಕೆಳಗೆ ಹೋಗೋಣ ನಡೆ" ಎಂದನು ಶೇಖರನೊಂದಿಗೆ.

ಸಂದರ್ಭ ಕೈಜಾರಿತೆಂದು ನೊಂದುಕೊಂಡನು ಶೇಖರ. ಸ್ನೇಹಿತರಿಬ್ಬರೂ ಕೆಳಗಿಳಿದು ಒಂದು ಕಲ್ಲು ಬಂಡೆಯ ಮೇಲೆ ಕುಳಿತುಕೊಂಡರು. ಆಗ ವಿಜಯನು ಶೇಖರನೊಂದಿಗೆ, "ನನಗೆ ನಿನ್ನೆ ರಾತ್ರಿ ಒಂದು ಕೆಟ್ಟ ಕನಸು ಬಿತ್ತು" ಎಂದನು.

"ಏನದು?" ಎಂದು ಶೇಖರನು ಕೇಳಿದ. "ನೀನು ನನ್ನನ್ನು ಕತ್ತಿಯಿಂದ ತಿವಿದುಬಿಟ್ಟೆ. ನಾನು ಪ್ರಾಣ ಬಿಡುತ್ತ ನಿನ್ನ ಹೆಸರನ್ನೇ ಉಚ್ಚರಿಸುತ್ತ ನಿನ್ನ ಕಣ್ಣುಗಳನ್ನೇ ನೋಡಿದೆ. ನಮ್ಮಂಥ ಸ್ನೇಹಿತರೊಳಗೆ ಇಂತಹುದೊಂದು ಸಂಘಟನೆ ಬಂದೀತೆಂದು ಊಹಿಸಲೂ ಸಾಧ್ಯವಿಲ್ಲ ಅಲ್ಲವೆ?" ಎಂದನು ವಿಜಯ.

ಶೇಖರನ ಬಾಯಿಯಿಂದ ಮಾತೇ ಬರಲಿಲ್ಲ. ಅವನ ಮುಖವು ರಕ್ತಹೀನವಾಗುವುದನ್ನು ನೋಡಿ ವಿಜಯನು, "ಶೇಖರಾ, ನೀನು ನನ್ನನ್ನು ಬಹಳ ದಿನಗಳಿಂದ ಕೊಲ್ಲಬೇಕೆಂತಲೇ ನೋಡುವೆಯೆಂದಾಯಿತು.

ನನ್ನಿಂದ ನಿನಗೆ ಯಾವ ದ್ರೋಹ ನಡೆದಿದೆ? ಮುಚ್ಚು ಮರೆಮಾಡದೆ ಹೇಳಿಬಿಡು " ಎಂದನು.

ಗತ್ಯಂತರವಿಲ್ಲದೆ ಶೇಖರನು ತಾನು ತನ್ನ ತಂದೆಗೆ ಕೊನೆಯ ಕ್ಷಣದಲ್ಲಿ ಪ್ರಮಾಣಮಾಡಿಕೊಟ್ಟ ಮಾತನ್ನು ಕುರಿತು ವಿಜಯನೊಂದಿಗೆ ಹೇಳಿಬಿಟ್ಟನು. ಅದನ್ನೆಲ್ಲಾ ಕೇಳಿದ ಮೇಲೆ ವಿಜಯನು, "ನೀನು ಶ್ರೀರಾಮನ ಹಾಗೆ ಪಿತೃ ವಾಕ್ಯವನ್ನು ಪಾಲಿಸಲು ನಿಶ್ಚಯಿಸಿರುವುದನ್ನು ಮೆಚ್ಚಲೇ ಬೇಕು. ಈಗಲೇ ನನ್ನನ್ನು ನಿನ್ನ ಕತ್ತಿಯಿಂದ ಸಂಹರಿಸಿ ನಿನ್ನ ತಂದೆಗೆ ಕೊಟ್ಟ ಮಾತನ್ನು ಉಳಿಸಿಕೊ!" ಎಂದನು.

ಹೇಳಿದ್ದೇ ಸಾಕು ಎಂಬ ಹಾಗೆ ಶೇಖರನು ಸರ್ರನೆ ಕತ್ತಿ ಹಿರಿದನು. ಅದೇ ಕ್ಷಣದಲ್ಲಿ ವಿಜಯನು ಕೂಡಾ ತನ್ನ ಕತ್ತಿಯನ್ನು ಸೆಳೆದು ಶೇಖರನನ್ನು ಇದಿರಿಸಿದನು. ಶೇಖರನು ಅಪ್ರತಿಭನಾಗಿ ನಿಂತನು.

ವಿಜಯನು ಮಂದಹಾಸಮಾಡುತ್ತ, "ಮತ್ತೇನಿಲ್ಲ ಶೇಖರಾ. ನೀನು ನನ್ನನ್ನು ಸುಮ್ಮನೆ ಕೊಂದುಬಿಟ್ಟರೆ ನಿನಗೆ ಹತ್ಯಮಾಡಿದ ಪಾಪ ಬರುತ್ತದೆ. ಹೇಡಿಯಂತೆ ಸತ್ತ ನನಗೆ ನರಕವೂ ಸಿಗುತ್ತದೆ. ಇಬ್ಬರೂ ವೀರೋಚಿತವಾಗಿ ಹೋರಾಡಿ ಸತ್ತರೆ ವೀರಸ್ವರ್ಗ ಸಿಗುತ್ತದೆ ನೋಡು!" ಎಂದನು.

ಆ ಮೇಲೆ ಇಬ್ಬರೂ ಕತ್ತಿಯುದ್ಧಮಾಡಿದರು. ವಿಜಯನ ಪರಾಕ್ರಮವನ್ನು ಶೇಖರನು ತಡೆದುಕೊಳ್ಳಲಾರದಾದನು. ವಿಜಯನು ಅವನನ್ನು ಕೆಳಕ್ಕೆ ತಳ್ಳಿ "ಪಿತೃವಾಕ್ಯಪಾಲನೆ ನಿನ್ನಿಂದಾಗಲಿಲ್ಲ, ವೀರ ಸ್ವರ್ಗಕ್ಕೆ ಹೋಗು!" ಎಂದು ಒಂದೇಟಿಗೆ ಅವನ ತಲೆಯನ್ನು ಹಾರಿಸಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ವಿಜಯನು ತನ್ನ ಆಪ್ತಮಿತ್ರನನ್ನು ಕೊಂದುದು ನ್ಯಾಯವೆನಿಸುವುದೇ? ಸೋತುಬಿದ್ದವನನ್ನು ಹಾಗೆ ಕೊಲ್ಲಬಹುದೇ? ಶೇಖರನು ಎಲ್ಲರ ಹಾಗಿನ ಹಂತಕನೇನಲ್ಲ. ಅವನು ಒಂದು ಆದರ್ಶಕ್ಕಾಗಿ ವಿಜಯನನ್ನು ಕೊಲ್ಲಬೇಕೆಂದುಕೊಂಡನು. ಅಂಥವನನ್ನು ಕಾರಾಗೃಹದಲ್ಲಿ ಹಾಕಬಹುದಿತ್ತು. ಅಥವಾ ದೇಶದಿಂದ ಓಡಿಸಬಹುದಿತ್ತು. ಹಾಗೆ ಮಾಡದೆ ವಿಜಯನು ಏಕೆ



ಅವನನ್ನು ಕೊಂದನು? ಶೇಖರನು ತನ್ನನ್ನು ಕೊಲ್ಲಲಿದ್ದ ನೆಂಬ ಸಿಟ್ಟಿನಿಂದಲೋ? ಅಥವಾ ಅವನ ಮೇಲೆ ನಿಜವಾದ ಸ್ನೇಹಭಾವ ಅವನಿಗಿರಲಿಲ್ಲವೇ? ಈ ಸಂದೇಹಕ್ಕೆ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಚೂರಾಗುತ್ತದೆಂದು ತಿಳಿ!" ಎಂದು ಎಚ್ಚರಿಸಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಪಿತೃವಾಕ್ಯ ಪಾಲನೆಯಾದರೂ ಶೇಖರನು ಮಾಡಲಿದ್ದ ಕೆಲಸವು ಕೊಲೆಯೇ. ಆದರೆ ಶೇಖರನನ್ನು ವಿಜಯನು ಹತ್ಯೆ ಮಾಡಿದಂತಾಗುವುದಿಲ್ಲ. ಅವನು ದ್ವಂದ್ವ ಯುದ್ಧ ದಲ್ಲಿ ಶೇಖರನು ತನ್ನನ್ನು ಕೊಲ್ಲುವ ಸಂದರ್ಭವನ್ನು ಕೊಟ್ಟನು. ಯುದ್ಧದಲ್ಲಿ ವಿಜಯನನ್ನು ಕೊಲ್ಲುವ ಶಕ್ತಿ ಶೇಖರನಿಗಿಲ್ಲದೆ ಹೋಯಿತು. ಪಿತೃವಾಕ್ಯವನ್ನು ಪಾಲಿಸುವುದೊಂದೇ ಮನುಷ್ಯನಿಗಿರುವ ಮಹತ್ವದ ಆಶಯವಾಗಲಾರದು. ಕೃತಜ್ಞತೆ, ರಾಜಭಕ್ತಿ, ಸ್ನೇಹ ಧರ್ಮ ಮೊದಲಾದ ಅನೇಕ ದೊಡ್ಡ ದೊಡ್ಡ ಆಶಯಗಳು ಮನುಷ್ಯನಿಗೆ ಇವೆ. ಈ ಆಶಯಗಳ ನಡುವೆ ಸಂಘರ್ಷಣೆ ಬಂದಾಗ, ಕೆಳತರಗತಿಯ ಆಶಯಗಳನ್ನು ಬಿಟ್ಟು ಉನ್ನತವಾದ ಆಶಯಗಳನ್ನೇ ಹಿಡಿಯಬೇಕು. ಶೇಖರನ ವಿಷಯದಲ್ಲಿ ಪಿತೃವಾಕ್ಯ ಪಾಲನೆಯೆಂಬುದು ಹೀನವಾದ ಕ್ಷುದ್ರವಾದ ಆಶಯ. ಶೇಖರನ ತಂದೆ ಕ್ಷುದ್ರ ಮನುಷ್ಯನಾದುದರಿಂದಲೇ ಅಂತಹ ಕೋರಿಕೆಯನ್ನು ಕೋರಿದನು. ರಾಜನು ಉದಾರನಾದುದರಿಂದ ಅವನು ಎಷ್ಟೋ ತಪ್ಪು ಮಾಡಿದುದಕ್ಕೆ ಅನೇಕಸಾರಿ ಕಠಿನ ಕ್ರಮ ತೆಗೆದು ಕೊಂಡು, ತುಂಬಿದ ಸಭೆಯಲ್ಲಿ ಅವಮಾನಪಡಿಸಿದರೂ ಉದ್ಯೋಗದಿಂದ ತೆಗೆದು ಹಾಕಲಿಲ್ಲ; ಮುಖ್ಯವಾಗಿ ಶೇಖರನ ತಂದೆ ತನ್ನ ಉದ್ಯೋಗ ನಿರ್ವಹಣೆಯನ್ನು ಸಮರ್ಥತೆಯಿಂದ ಮಾಡಲಿಲ್ಲವೆಂದೇ ಹೇಳಬೇಕು. ಶೇಖರನು ಕೂಡಾ ಕ್ಷುದ್ರನ ಹಾಗೆಯೇ ಪ್ರವರ್ತಿ ಸಿದ್ದಾನೆ. ತನ್ನ ತಂದೆ ಕೊನೆಯ ಕೋರಿಕೆಯ ಕಾರಣ ಗಳನ್ನು ಹೇಳಿದಾಗ, ಅಂತಹ ಕೋರಿಕೆಯನ್ನು ನೆರವೇರಿಸುವ ಅಗತ್ಯವಿಲ್ಲವೆಂದು ನಿರ್ಧರಿಸಿ ಆ ಮಾತು ತಂದೆಗೆ ಹೇಳಿರಬೇಕಿತ್ತು. ಅವನು ಹಾಗೆ ಮಾಡಲಿಲ್ಲ. ವಿಜಯನು ತನ್ನನ್ನು ಕೊಲ್ಲುವಂತೆ ಹೇಳಿದಾಗ ಕತ್ತಿ ಹಿರಿಯುವುದಕ್ಕೆ ಬದಲಾಗಿ ಅವನ ಕಾಲ ಮೇಲೆ ಬೀಳಬೇಕಿತ್ತು. ಹಾಗೂ ಮಾಡಲಿಲ್ಲ. ವಿಜಯನು ತನ್ನನ್ನು ಕೊಲ್ಲುವಂತೆ ಹೇಳಿದ ಮರುಕ್ಷಣ ಕೊಲೆ ಮಾಡಲು ಸಿದ್ಧನಾಗುವುದಕ್ಕಿಂತ ಪರಮ ನೀಚತನ ಬೇರೊಂದಿಲ್ಲ. ಅಂಥವನ ಸಾವನ್ನು ಕುರಿತು ಆಲೋಚಿಸಬೇಕಾದ ವಿಷಯವೇನಿಲ್ಲ"

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡ ತೊಡಗಿತು.





# ದೆವ್ವಗಳ ಚಾಕರಿ

ಅನೇಕ ವರ್ಷಗಳ ಹಿಂದೆ ಒಂದಾನೊಂದು ಊರಿನಲ್ಲಿ ಒಬ್ಬ ರೈತನಿದ್ದನು. ಅವನಿಗೆ ಎರಡು ಎತ್ತುಗಳಿದ್ದುವು. ಆ ಜೋಡಿ ಎತ್ತುಗಳಲ್ಲಿ ಒಂದು ಎತ್ತು ಸತ್ತುಹೋಯಿತು. ಅದಕ್ಕೆ ಬದಲಾಗಿ ಇನ್ನೊಂದು ಎತ್ತನ್ನು ಕೊಂಡು ಕೊಂಡು ಬರಲಿಕ್ಕಾಗಿ ಆ ರೈತನು, ತನ್ನ ಮಗನನ್ನು ಜತೆಗೆ ಕರೆದುಕೊಂಡು, ಪಶುಗಳ ಸಂತೆಗೆ ಹೊರಟನು. ಅದು ಬಹಳ ದೂರ ವಾದುದರಿಂದ, ದಾರಿಯಲ್ಲಿ ತಿನ್ನಲಿಕ್ಕಾಗಿ ರೈತನ ಹೆಂಡತಿ ಮೂರು ಸಜ್ಜೆ ರೊಟ್ಟಿಗಳನ್ನು ಸುಟ್ಟು ಚಟ್ನಿ ಹಾಕಿ ಮೂಟೆ ಕಟ್ಟಿ ಕೊಟ್ಟಿದ್ದಳು.

ತಂದೆ ಮಗಂದಿರು ಸಂತೆ ನಡೆಯುವಲ್ಲಿ ಹೋಗಿ, ಎತ್ತುಗಳನ್ನು ಹುಡುಕಿ, ಪರೀಕ್ಷಿಸಿ ಒಂದು ಎತ್ತನ್ನು ಕೊಂಡು ಕೊಂಡರು. ಹಿಂದಿರುಗಿ ಬರುವಾಗ ದಾರಿ ಯಲ್ಲಿ ಒಂದು ಇಳಿ ಬಾವಿಯನ್ನು ನೋಡಿ, ರೊಟ್ಟಿ ತಿನ್ನಲು ಇಬ್ಬರೂ ಬಾವಿಯ ಮೆಟ್ಟಲುಗಳಲ್ಲಿ ಇಳಿದು ಕೈಕಾಲುಗಳನ್ನು ತೊಳೆದುಕೊಂಡರು. ಮೆಟ್ಟಿಲ ಮೇಲೆ ಕುಳಿತು ರೈತನ ಮಗನು ರೊಟ್ಟಿಯ ಮೂಟೆ ಬಿಚ್ಚುತ್ತಾ, "ಅಪ್ಪಾ, ನೀವು ಎರಡು ತಿನ್ನಿ, ನಾನು ಒಂದು ತಿನ್ನುತ್ತೇನೆ" ಎಂದನು.

ಆ ಇಳಿ ಬಾವಿಯೊಳಗೆ ಮೂರು ದೆವ್ವಗಳು ಕುಟುಂಬ ನಡೆಸಿಕೊಂಡಿದ್ದುವು. ರೈತನ ಮಗನು ಗಂಟು ಬಿಚ್ಚುತ್ತಾ ಹೇಳಿದ ಮಾತು ಕೇಳಿ ಅವು ಮೂರೂ ಹೆದರಿಬಿದ್ದು, ಅವರ ಇದಿರಿಗೆ ಬಂದು, "ಅಯ್ಯ ಅಯ್ಯಾ! ನಿಂ ಪುಣ್ಯ! ನಮ್ಮನ್ನು ತಿಂದು ಬಿಡಬೇಡಿ. ನೀವು ಏನು ಕೆಲಸ ಹೇಳಿದರೂ ಅದನ್ನು ಮಾಡುತ್ತೇವೆ!" ಎಂದುವು.

ರೈತನು ಇವು ದೆವ್ವಗಳೆಂದೂ, ತಮ್ಮನ್ನು ನೋಡಿ ಹೆದರಿದುವೆಂದೂ ಕೂಡಲೇ ತಿಳಿದುಕೊಂಡು, "ಸರಿ ಸರಿ! ಒಳ್ಳೇ ವೇಳೆ! ನೀವು ವಿನಯದಿಂದ ಬೇಡಿ ಕೊಳ್ಳುವುದರಿಂದ ನಮ್ಮ ಮಂತ್ರ ಹಾಕಲಾರೆವು. ಹೇಳಿದ ಮಾತಿನಂತೆ ನಮ್ಮೊಂದಿಗೆ ಬಂದು ನಾವು ಹೇಳುವ ಎಲ್ಲಾ ಕೆಲಸವನ್ನೂ ಮಾಡಿಕೊಂಡಿರಿ. ನಿಮ್ಮನ್ನು ತಿನ್ನಲಾರೆವು" ಎಂದನು. ರೈತನೂ ಅವನ ಮಗನೂ ಹೊಸ ಎತ್ತಿನೊಂದಿಗೆ ಆ ದೆವ್ವಗಳನ್ನು ಕೂಡಾ ಮನೆಗೆ ಕರೆದು ತಂದು, ಅವುಗಳಿಂದ ಎಲ್ಲಾ ಚಾಕರಿಗಳನ್ನೂ ಮಾಡಿಸಿಕೊಳ್ಳಲು ತೊಡಗಿದರು.

ಇಲ್ಲಿ ಹೀಗೆ ದೆವ್ವಗಳು ಚಾಕರಿಮಾಡಿಕೊಂಡಿರು ವಾಗ, ಅವುಗಳನ್ನು ಆಗಾಗ ನೋಡಲು ಬರುವ

ಎ. ಸರೋಜಿನಿ

ಇತರ ದೆವ್ವಗಳು, ಬಾವಿಯಲ್ಲಿ ಅವು ಇಲ್ಲದೆ ಹೋದುದನ್ನು ನೋಡಿ, ಅಲ್ಲಿದ್ದ ಪ್ರಾಣಿಗಳೊಂದಿಗೆ ವಿಚಾರಿಸಿದುವು. ಯಾರೋ ಇಬ್ಬರು ಮನುಷ್ಯರು ಬಂದು ಅವುಗಳನ್ನು ಕರೆದುಕೊಂಡು ಹೋದ ಸಂಗತಿ ಅವಕ್ಕೆ ಗೊತ್ತಾಯಿತು.

ಆ ಹಳೇ ದೆವ್ವಗಳನ್ನು ಹುಡುಕುತ್ತ ಒಂದು ಹೊಸ ದೆವ್ವವು ರೈತನ ಮನೆಗೆ ಬಂದು, ಎತ್ತಿನ ಹಟ್ಟಿಯಲ್ಲಿ ಕೆಲಸಮಾಡುವ ದೆವ್ವಗಳನ್ನು ಕಂಡು ಹಿಡಿಯಿತು. "ನೀವು ಆ ಬಾವಿಯನ್ನು ಬಿಟ್ಟು ಇಲ್ಲಿಗೆ ಏಕೆ ಬಂದಿದ್ದೀರಿ?" ಎಂದು ಕೇಳಿತು ಹೊಸ ದೆವ್ವ.

"ನಮ್ಮ ಕಷ್ಟ ಏನೆಂದು ಹೇಳುವುದು? ಇಬ್ಬರು ಮಂತ್ರದ ಮನುಷ್ಯರು ಬಂದು ನಮ್ಮ ಬಾವಿಗೆ ಇಳಿದು, ನಮ್ಮನ್ನು ತಿನ್ನುವೆವೆಂದು ಮಂತ್ರಸಾಧನದ ಗಂಟುಬಿಚ್ಚಿ ಕುಳಿತರು. ನಾವು ಅವರ ಕಾಲಿಗೆ ಬಿದ್ದು ಬೇಡಿಕೊಳ್ಳಲು, ನಮಗೆ ಇಂಥ ಗತಿ ಪ್ರಾಪ್ತವಾಯಿತು" ಎಂದುವು ಹಳೇ ದೆವ್ವಗಳು.

"ಹಾಗೇನು? ನಾನು ಕ್ಷಣ ಮಾತ್ರದಲ್ಲಿ ಆ ಮನುಷ್ಯರನ್ನು ಹತಮಾಡಿಬಿಡುತ್ತೇನೆ. ಅವರು ಬರುವವರೆಗೆ ನಾನು ಈ ಮೂಲೆಯಲ್ಲಿ ಅಡಗಿರುತ್ತೇನೆ" ಎಂದಿತು ಹೊಸ ದೆವ್ವ.

ಆಗಲೇ ರೈತನೂ ಅವನ ಹೆಂಡತಿಯೂ ಹಟ್ಟಿಗೆ ಬಂದರು. ತಂದೆ ಹೊಸ ಎತ್ತನ್ನು ನೋಡಿ ಮಗನೊಂದಿಗೆ, "ಎಲೋ! ಈ ಹೊಸತಾಗಿ ಬಂದುದಕ್ಕೆ ಜಡ ಹಿಡಿದಿದೆ. ಕಾಯಿಸಿಡಲು ಕಬ್ಬಿಣದ ಸೌಟು ಒಲೆಯಲ್ಲಿ ಹಾಕಿದ್ದೇನೆ. ಅದನ್ನು ಬೇಗ ಹಿಡಿದುಕೊಂಡು ಬಾ" ಎಂದನು.

ಅದನ್ನು ಕೇಳಿ ಅಡಗಿಕೊಂಡಿದ್ದ ದೆವ್ವವು ಮಹಾ ಭೀತಿಯಿಂದ ನಡುಗುತ್ತ, ಓಡಿಬಂದು ರೈತನ ಕಾಲಿಗೆ ಬಿದ್ದು, "ಅಯ್ಯಯ್ಯಾ! ನನಗೆ ಕಾಸಿಗೀಸಿ ಇಡಬೇಡಿ! ನಾನು ಕೂಡಾ ನಿಮ್ಮ ಚಾಕರಿ ಮಾಡುವ ಹಳೇ ದೆವ್ವಗಳ ಹಾಗೆಯೇ ಕೆಲಸಮಾಡುತ್ತೇನೆ. ಅವರು ಹೊಲದಿಂದ ಹತ್ತಿ ಮಾತ್ರವೇ ತರುತ್ತಾರಷ್ಟೆ? ನಾನು ಅದನ್ನು ಹಿಕ್ಕಿ ಕೊಡುತ್ತೇನೆ" ಎಂದಿತು.

"ಹುಂ. ನಾನೂ ಅದನ್ನೇ ಹೇಳಬೇಕೆಂದಿದ್ದೆ. ಇನ್ನು ನನಗೆ ಹಿಕ್ಕಿದ ಹತ್ತಿಯೇ ತರಬೇಕು. ಮುದ್ದೆ ಹತ್ತಿ ತಂದರೆ ಸಾಲದು." ಎಂದನು ರೈತ.

ಹೀಗೆ ಚಾಕರಿಗೆ ಸೇರಿದ ಹೊಸ ದೆವ್ವವನ್ನು ಹಳೇ ದೆವ್ವಗಳು ಬಯ್ಯುತ್ತ, "ಇದೇನಾ ನಿನ್ನ ಪ್ರತಾಪ? ನಮಗೆ ಬಿಡುಗಡೆ ಕೊಡಿಸುತ್ತೇನೆ ಅಂತ ಜಂಬ ಕೊಚ್ಚಿ, ಹತ್ತಿ ಹಿಕ್ಕುವ ಕೆಲಸವನ್ನು ಹೊಸತಾಗಿ ಹೇರಿಸಿದೆಯಲ್ಲಾ! ನಿನ್ನನ್ನು ಎತ್ತಿ ಕುಪ್ಪೇ ಕುಳಿಗೆ ಹಾಕ!" ಎಂದು ಹೊಡೆದಾಡಿದುವು. "ಏನ್ರೋದು ಗಲಾಟೆ!" ಎಂದು ರೈತನು ಕೂಗಿದ್ದು ಕೇಳಿ, ಗಪ್ಪನೆ ಬಾಯಿ ಮುಚ್ಚಿ, ಚಾಕರಿಗೆ ತೊಡಗಿದುವು.





# ಮನುಷ್ಯರ ಪರೀಕ್ಷೆ

ಬಹಳ ಕಾಲದ ಹಿಂದೆ ವಿಂಧ್ಯಾಟವಿಯೊಳಗೆ ಕಾಮರೂಪನೆಂಬ ಒಬ್ಬ ದೊಡ್ಡ ರಾಕ್ಷಸನಿದ್ದನು. ಅವನಿಗೆ ಯಾವ ರೂಪ ಬೇಕಾದರೂ ಧರಿಸುವಂತಹ ಶಕ್ತಿಯಿದ್ದಿತು. ಆದರೆ ಅವನು ಏಕಾಂಗಿಯಾಗಿದ್ದುದರಿಂದ, ತಿಂದೂ ತಿರಿಗೀ ಮಲಗೀ ಬೇಸತ್ತು ಹೋದನು. ಬದುಕಿನ ಮೇಲೆಯೇ ವಿರಕ್ತಿ ಹುಟ್ಟಿ, ಸತ್ತುಬಿಡುವುದೇ ಒಳಿತೆನಿಸಿತು.

ಆದರೆ ಹೇಗೆ ಸಾಯುವುದೆಂಬ ಪ್ರಶ್ನೆ ಎದ್ದಿತು. ಬೆಟ್ಟದ ಮೇಲಿನಿಂದ ಹಾರಲು, ಅವನು ಒಂದೇ ಹಜ್ಜೆಗೆ ಬೆಟ್ಟದಿಂದ ಇಳಿಯುವಂಥವನು. ಸಮುದ್ರದಲ್ಲಿ ಬೀಳೋಣವೆಂದರೆ ಸಮುದ್ರದ ಆಳ ಅವನ ಕಾಮರೂಪಕ್ಕೆ ಸಾಕಾಗದು. ಚಿಕ್ಕ ರೂಪದಲ್ಲಿ ಸಾಯಲು ಪ್ರಯತ್ನಿಸಿದಾಗ ಪ್ರಮಾದವಶಾತ್ ಅವನ ಅಸಲು ರೂಪವೇ ಬಂದುಬಿಡುತಿತ್ತು. ಆದುದರಿಂದ ಅವನಿಗೆ ಸಾಯುವ ಮಾರ್ಗ ತೋರದೆಹೋಯಿತು.

ಆ ಪರಿಸ್ಥಿತಿಯಲ್ಲಿ ಅವನಿರುವಾಗ, ಒಬ್ಬ ಮಹಾ ತೇಜಸ್ವಿಯಾದ ಋಷಿ ವಿಂಧ್ಯಾಟವಿಗೆ ಬಂದನು. ಆತನ ತೇಜಸ್ಸನ್ನು ನೋಡಿ ಕಾಮರೂಪ ರಾಕ್ಷಸನು ಪ್ರಭಾವಿತನಾಗಿ, ಮನುಷ್ಯ ರೂಪದಲ್ಲಿ ಆತನನ್ನು ಸಂಧಿಸಿ, ತನ್ನ ಸಮಾಚಾರವನ್ನೆಲ್ಲಾ ಹೇಳಿಕೊಂಡನು.

"ಹೌದಪ್ಪಾ, ನಿನ್ನ ಸಮಸ್ಯೆ ನನಗೆ ಅರ್ಥವಾಯಿತು. ಇದು ರಾಕ್ಷಸರಿಗೆ ತಕ್ಕುದಾದ ಕಾಲವೇ ಅಲ್ಲ. ಈ ಕಾಲದಲ್ಲಿ ರಾಕ್ಷಸ ಜನ್ಮದಲ್ಲಿ ಯಾವ ಸುಖವೂ ದೊರೆಯಲಾರದು. ಆದರೆ ನಿನಗೆ ಇನ್ನೂ ಅನೇಕ ವರ್ಷಗಳವರೆಗೆ ಆಯುಷ್ಯವಿದೆ. ಈಗ ನೀನು ಏನು ಮಾಡಿದರೂ ಸಾಯಲಾರೆ. ನಿನ್ನ ಪೂರ್ವಿಕರು ಪಡೆದ ವರ ಬಲವು ಅಂಥಾದ್ದು. ಆದರೆ ನಾನು ನಿನಗೆ ಒಂದು ಸಹಾಯ ಮಾಡಬಹುದು. ನಿನಗೆ ಯಾವ ಜನ್ಮ ಬೇಕೋ ಆ ಜನ್ಮವನ್ನು ಕೊಡಬಲ್ಲೆ. ಆದರಿಂದ ನಿನ್ನ ಕಾಮರೂಪದ ಶಕ್ತಿ ಕೂಡಾ ಹೋಗಿ, ಅದೇ ಜನ್ಮದವನ ಹಾಗೆಯೇ ಇರುತ್ತೀ. ನಿನಗೆ ಯಾವ ಜನ್ಮ ಬೇಕೋ ಕೇಳಿಕೋ, ಈ ರಾಕ್ಷಸ ಜನ್ಮದಿಂದ ಮುಕ್ತಿ ಕೊಡಿಸುತ್ತೇನೆ. ಏನನ್ನುತ್ತೀ?" ಎಂದನು ಋಷಿ.

ಕಾಮರೂಪನಿಗೆ ಯಾವ ಜನ್ಮ ಕೇಳಬೇಕೆಂದು ಗೊತ್ತಾಗದೆ, ಋಷಿಯನ್ನೇ ಆಲೋಚನೆ ಕೇಳಿದನು.

"ಎಲ್ಲಾ ಜನ್ಮಗಳಲ್ಲಿ ಮಾನವ ಜನ್ಮವು ಉತ್ತಮವಾದುದು. ಅದನ್ನೇ ಕೇಳಿಕೋ" ಎಂದು ಋಷಿ

"ವಸುಂಧರ"

ಕಾಮರೂಪನಿಗೆ ಹೇಳಿದನು. ಋಷಿಯ ಮಾತಿನಲ್ಲಿ ಎಷ್ಟು ನಿಜವಿರುವುದೆಂದು ತಿಳಿದು ಅಮೇಲೆ ಕೇಳೋಣವೆಂದು ಕಾಮರೂಪನಿಗೆ ತೋರಿತು. ಕೆಲವು ದಿನ ಮನುಷ್ಯರ ನಡುವೆ ಇದ್ದು ನೋಡಿಕೊಂಡು ಬರುತ್ತೇನೆಂದು ಋಷಿಗೆ ಹೇಳಿ, ಕಾಮರೂಪನು ಅಲ್ಲಿಂದ ಹೊರಟನು.

ಅವನು ಮನುಷ್ಯನ ರೂಪದಲ್ಲಿ ಒಂದು ನಗರವನ್ನು ತಲಪಿದನು. ಅಲ್ಲಿ ತಂಗಿರಲು ಒಂದು ಮನೆಯನ್ನು ನೋಡಿಕೊಂಡು ಸುತ್ತುಮುತ್ತು ತಿರುಗುತ್ತ ಮನುಷ್ಯರನ್ನು ಗಮನಿಸಲು ತೊಡಗಿದನು. ಮನುಷ್ಯರೆಲ್ಲ ಏನೇನೋ ನೀತಿ ನಿಯಮಗಳನ್ನು ಪಾಲಿಸುತ್ತ ಒಂದು ಕ್ರಮವಿಟ್ಟುಕೊಂಡು ಜೀವಿಸುತ್ತಿರುವಂತೆ ಅವನಿಗೆ ತೋರಿತು.

ಆ ನಗರಕ್ಕೆ ವೀರಸಿಂಹನೆಂಬವನು ರಕ್ಷಕನಾಗಿದ್ದನು. ವೀರಸಿಂಹನಂಥವನು ನಗರ ರಕ್ಷಕನಾಗಿರುವಾಗ ನಗರಕ್ಕೆ ಯಾರಿಂದಲೂ ಯಾವ ಭಯವೂ ಇಲ್ಲವೆಂದು ನಗರವಾಸಿಗಳಿಗೆ ಗಟ್ಟಿ ನಂಬುಗೆ ಇದ್ದಿತು. ಆ ವೀರಸಿಂಹನ ಪ್ರತಾಪ ಎಂತಹುದೆಂದು ತಿಳಿಯುವ ಕುತೂಹಲದಿಂದ ಕಾಮರೂಪನು ಅವನನ್ನು ನೋಡಲು ಹೋದನು. ಅವನೊಂದಿಗೆ ಮಧುರವಾಗಿ ಮಾತಿಗೆ ಪ್ರಾರಂಭಿಸಿ, ಅವನ ಕಾವಲಿನ ಅನುಭವ ವಿಶೇಷಗಳನ್ನು ಕುರಿತು ತಿಳಿಯುವ ಕುತೂಹಲವನ್ನು ವ್ಯಕ್ತಪಡಿಸಿದನು.

ಅದಕ್ಕೆ ಉತ್ತರ ಕೊಡುತ್ತ, ವೀರಸಿಂಹನು ತನ್ನ ಶಕ್ತಿಸಾಮರ್ಥ್ಯಗಳನ್ನು ಕುರಿತು ಕಾಮರೂಪನೊಂದಿಗೆ ಎಷ್ಟೋ ಜಂಬದಲ್ಲಿ ಹೇಳಿದನು. ತಾನು ನಗರ ರಕ್ಷಣೆ ಮಾಡಿದ ಧೀರ ಸಾಹಸಗಳನ್ನು ಕೊಚ್ಚಿಕೊಂಡನು. ಕಡೆಗೆ, "ನನಗೊಂದು ಆಸೆ. ವಿಕ್ರಮಾರ್ಕನಂಥ ರಾಜರು ಎಷ್ಟೋ ರಾಕ್ಷಸರನ್ನು ಇದಿರಿಸಿ ಕೊಂದರಂತೆ. ಸಂದರ್ಭ ದೊರೆಕಿ, ನನಗೂ ಒಬ್ಬ ರಾಕ್ಷಸನನ್ನು ಕೊಂದು ಹೆಸರು ಪಡೆಯಬೇಕು!" ಎಂದನು.

ಕಾಮರೂಪನು ಕೂಡಲೇ ತನ್ನ ನಿಜರೂಪವನ್ನು ಧರಿಸಿ, "ಇಕೋ ಸಂದರ್ಭ! ನನ್ನನ್ನು ಕೊಲ್ಲು. ಆಗದಿದ್ದರೆ ನನ್ನ ಸುತ್ತಲೂ ಮೂರುಸಾರಿ ಪ್ರದಕ್ಷಿಣೆ



ಮಾಡಿ ನನ್ನ ಕಾಲಿಗೆ ಅಡ್ಡಬೀಳು. ನಿನ್ನನ್ನು ಸುಮ್ಮನೆ ಬಿಟ್ಟುಬಿಡುತ್ತೇನೆ" ಎಂದನು.

ವೀರಸಿಂಹನು ಗಡಗಡ ನಡುಗುತ್ತ ರಾಕ್ಷಸನಿಗೆ ಮೂರು ಪ್ರದಕ್ಷಿಣೆ ಹಾಕಿ ಕಾಲಿಗೆ ಬಿದ್ದನು. ಮನುಷ್ಯರ ಪ್ರತಾಪ ಯಾವ ರೀತಿಯದೆಂದು ತಿಳಿದುಕೊಂಡು ಕಾಮರೂಪನು ಅಲ್ಲಿಂದ ಮಾಯವಾಗಿಹೋದನು.

ಆ ನಗರದಲ್ಲಿಯೇ ಒಬ್ಬ ಧನವಂತನಿದ್ದನು. ಅವನಿಗೆ ಹೇಮಾಂಗಿನಿ ಎಂಬ ಒಬ್ಬಳೇ ಮಗಳು. ಅವಳಿಗೆ ಮದುವೆಯ ವಯಸ್ಸು ಬಂದಿತ್ತು. ಮಗಳಿಗೆ ಮದುವೆ ಮಾಡಬೇಕೆಂದು ಧನಿಕನು ಒಳ್ಳೆಯ ವರನನ್ನು ಹುಡುಕಿಕೊಂಡಿದ್ದನು. ಕಾಮರೂಪನು ಸುಂದರನಾದ ಯುವಕನ ರೂಪವನ್ನು ಧರಿಸಿ ಧನಿಕನ ಮನೆಗೆ ಹೋಗಿ, ಹೇಮಾಂಗಿನಿಯನ್ನು ತನಗೆ ಕೊಟ್ಟು ಮದುವೆ ಮಾಡುವಂತೆ ಕೇಳಿದನು. ಧನಿಕನು ಅವನ ಕುಲಗೋತ್ರ ಮೊದಲಾದ ಅನೇಕ ಪ್ರಶ್ನೆಗಳನ್ನು ಕೇಳಿ, ಸರಿಯಾದ ಉತ್ತರ ದೊರೆಯದೆ ಕೊಡ ಲಾಗುವುದಿಲ್ಲವೆಂದು ಹೇಳಿಬಿಟ್ಟನು.

ಕೂಡಲೇ ಕಾಮರೂಪನು ನಿಜರೂಪ ಧರಿಸಿ, "ನಿನ್ನ ಮಗಳನ್ನು ನನಗೆ ಕೊಟ್ಟು ಮದುವೆಮಾಡು ವಿಯೋ ಇಲ್ಲವೋ?" ಎಂದು ಕೇಳಿದನು.

ಧನಿಕನು ಹೆದರಿ ನಡುಗುತ್ತ, ತನ್ನ ಮಗಳನ್ನು ಆ ರಾಕ್ಷಸನಿಗೆ ಕೊಟ್ಟು ಮದುವೆಮಾಡುತ್ತೇನೆಂದು ಒಪ್ಪಿದನು. ಆಗ ಕಾಮರೂಪನು ದಿಕ್ಕುಗಳು ನಡುಗು ವಂತೆ ನಗಾಡಿ, ಅಲ್ಲಿಂದ ಅದೃಶ್ಯನಾದನು. ಮನುಷ್ಯ ರಲ್ಲಿರುವ ಪ್ರೇಮಾಭಿಮಾನಗಳು ಎಷ್ಟೆಂಬುದು ಅವನಿಗೆ ಗೊತ್ತಾಯಿತು.

ಅದೇ ನಗರದಲ್ಲಿ ಶಿವಾನಂದನೆಂಬ ಮಹಾ ಭಗವದ್ಭಕ್ತನೊಬ್ಬನಿದ್ದನು. ಅವನ ಮನೆಯಲ್ಲಿ ಪ್ರತಿ ನಿತ್ಯವೂ ಭಜನೆ, ಪೂಜೆ, ನಮಸ್ಕಾರಗಳು ನಡೆಯು ತ್ತಿದ್ದುವು. ಜನರು ತಂಡೋಪತಂಡವಾಗಿ ಅವನ ಮನೆಗೆ ಹೋಗುತ್ತಿದ್ದರು.

ಒಂದು ದಿನ ಮಧ್ಯರಾತ್ರಿಯ ಹೊತ್ತಿನಲ್ಲಿ ಕಾಮ ರೂಪನು ಶಿವಾನಂದನ ಮನೆಗೆ ಹೊಕ್ಕು, ತನ್ನ ನಿಜ ರೂಪವನ್ನು ಅವನಿಗೆ ತೋರಿಸಿ "ನೀನು ದಿನಾ



ದೇವರನ್ನು ಭಜಿಸುವುದು ನನಗಾಗದು. ಈಗ ನನ್ನ ಇದಿರು ನೀನು ಪೂಜಿಸುವ ದೇವರನ್ನು ನಿಂದಿಸು. ನೀಚನೆಂದು ಹೇಳು! ಇಲ್ಲದಿದ್ದರೆ ನೀನು ಬದುಕಲು ಸಾಧ್ಯವಿಲ್ಲ!" ಎಂದನು.

ತನ್ನಿಂದ ಅಂತಹ ಪಾಪಮಾಡಿಸಬಾರದೆಂದು ಶಿವಾನಂದನು ರಾಕ್ಷಸನ ಕಾಲಿಗೆ ಬಿದ್ದು ಬೇಡಿಕೊಂಡನು. ಆದರೆ ರಾಕ್ಷಸನು ಒಪ್ಪಲಿಲ್ಲ. ಕೊಲ್ಲುವೆನೆಂದು ಹೆದರಿಸಿದನು. ರಾಕ್ಷಸನು ಹೇಗೆ ಹೇಗೆ ದೇವರನ್ನು ಬಯ್ಯಲು ಹೇಳುವನೋ ಹಾಗೆಯೇ ಶಿವಾನಂದನು ಬೈದನು. ಆ ಮೇಲೆ ಕಾಮರೂಪನು ಅಲ್ಲಿಂದ ಮಾಯವಾಗಿ ವಿಂಧ್ಯಾಟವಿಗೆ ಹೋಗಿಬಿಟ್ಟನು. ಮನುಷ್ಯರ ಭಕ್ತಿಯನ್ನು ಕುರಿತು ಕೂಡಾ ಅವನಿಗೆ ಗೊತ್ತಾಗಿಹೋಯಿತು.

ಕಾಮರೂಪನು ಸೀದಾ ಋಷಿಯ ಬಳಿಗೆ ಹೋಗಿ. ನಮಸ್ಕಾರಮಾಡಿ ಹೀಗೆಂದನು :

"ತಾವು ಮಾನವ ಜನ್ಮವೇ ಎಲ್ಲಾ ಜನ್ಮಗಳಲ್ಲಿ ಉತ್ತಮವೆಂದು ಹೇಳಿದಿರಿ. ಆದರೆ ಮನುಷ್ಯರು ಅವಕಾಶವಾದಿಗಳಾಗಿರುವವರು. ಅವರು ಸೃಷ್ಟಿಯೊಳಗಿರುವ ಎಲ್ಲಾ ಜಂತು ಜಾಲಗಳನ್ನೂ ತಮ್ಮ ಅಂಕೆಗೆ ತೆಗೆದುಕೊಂಡು, ನಾಗರಿಕತೆಯನ್ನು ಸೃಷ್ಟಿಸಿ, ಸಂತೋಷವಾಗಿ ಜೀವಿಸುತ್ತಿದ್ದಾರೆ ನಿಜವೇ. ಅದೆಲ್ಲವೂ ಕೇವಲ ಕೃತ್ರಿಮ. ಜನ್ಮತಃ ಅವರದೆಲ್ಲವೂ ಸುಳ್ಳೇ! ನಾಟಕವೇ! ಅವರು ವಿಶ್ವಾಸವಿಟ್ಟು ಇಷ್ಟಪಡುವಂತೆ ನಟಿಸುತ್ತ ಆದರಿಸುವುದರಲ್ಲಿ ಕೂಡಾ ಅವರಿಗೆ ನಂಬುಗೆ ಇಲ್ಲ." ಎಂದನು.

"ಹಾಗಾದರೆ ನೀನು ಯಾವ ಜನ್ಮ ಬೇಕೆಂದು ಕೇಳುವೆಯಪ್ಪಾ?" ಎಂದು ಋಷಿ ಕೇಳಿದನು.

"ಮಾನವ ಜನ್ಮವನ್ನೇ ಕೊಟ್ಟುಬಿಡಿ" ಎಂದನು ಕಾಮರೂಪ ರಾಕ್ಷಸ. ಅದನ್ನು ಕೇಳಿ ಋಷಿ ಆಶ್ಚರ್ಯಪಟ್ಟು ಕಾರಣವೇನೆಂದು ಕೇಳಿದನು :

"ಮಾನವರು ಎಷ್ಟೇ ಕೃತ್ರಿಮವಾಗಿ ಜೀವಿಸಿದರೂ ಇದು ಮಾನವರ ಕಾಲವೆಂಬುದು ನಿಜವೇ. ನನಗೆ ಎಷ್ಟೇ ಶಕ್ತಿ ಇದ್ದರೂ ಜೀವಿತದ ಮೇಲೆ ವೈರಾಗ್ಯ ಬಂದಿದೆ. ಆದರೆ ಮನುಷ್ಯರೊಳಗೆ ಜೀವಿತದ ಮೇಲೆ ವೈರಾಗ್ಯವೆಂಬುದೇ ಇಲ್ಲ. ಅವರಿಗೆ ಮರಣವೆಂದರೆ ತುಂಬಾ ಭಯ. ಆ ಮರಣವನ್ನು ದೂರ ದೂರ ದೂಡಲು ತಮ್ಮ ವಿಶ್ವಾಸಗಳೆಲ್ಲವನ್ನೂ ವಿಸರ್ಜಿಸಿಬಿಡಬಲ್ಲರು. ಮನುಷ್ಯರಿಗೆ ಜೀವಿಸಿರುವುದರಲ್ಲಿ ಏನೋ ಆಕರ್ಷಣೆ ಇದೆ. ಹೀಗೆ ಬದುಕಿರುವಷ್ಟು ಕಾಲ ಬದುಕಬೇಕೆಂಬ ಆಶೆಯಿರುವ ಮಾನವ ಜನ್ಮವೇ ನನಗೆ ತುಂಬಾ ಹಿಡಿಸಿತು." ಎಂದನು ಕಾಮರೂಪ.

ಋಷಿ ಮಂತ್ರಜಲ ಸಿಂಪಡಿಸಿದ ಕೂಡಲೇ ಕಾಮರೂಪನು ಸಾಮಾನ್ಯ ಮನುಷ್ಯನಾಗಿ ರಾಕ್ಷಸತ್ವವನ್ನು ಮರೆತು, ಎತ್ತಲೋ ಹೊರಟುಹೋದನು.





# ಪರಶುರಾಮ

ಪುರಾಣ ಕಾಲದಲ್ಲಿ ಋಚೀಕನ ಮಗನಾಗಿ ಹುಟ್ಟಿದವನು ಜಮದಗ್ನಿ. ವಿಶ್ವಾಮಿತ್ರನಿಗೆ ಜಮದಗ್ನಿ ಸೋದರಳಿಯನಾಗಬೇಕು. ಈ ಜಮದಗ್ನಿ ಪ್ರಸೇನಜಿತ್ತುವಿನ ಮಗಳಾದ ರೇಣುಕೆಯನ್ನು ಮದುವೆ ಮಾಡಿಕೊಂಡನು. ಇವರಿಗೆ ರಮಣ್ವಂತ, ಸುಷೇಣ, ವಸು, ವಿಶ್ವಾವಸು, ರಾಮ ಎಂಬ ಐವರು ಗಂಡು ಮಕ್ಕಳು ಹುಟ್ಟಿದರು.

ಹೀಗಿರುವಾಗ ಒಂದು ದಿನ ರೇಣುಕೆ ಎಂದಿನಂತೆ ನೀರು ತರಲು ನದಿಗೆ ಹೋದಾಗ, ಒಂದು ವಿಚಿತ್ರ ನಡೆಯಿತು. ಚಿತ್ರರಥನೆಂಬ ರಾಜನು ಜಲಕ್ರೀಡೆಯಾಡುವುದನ್ನು ನೋಡುತ್ತಾ ಅವಳು ಬಹಳ ಹೊತ್ತು ಮೈ ಮರೆತು ನಿಂತುಬಿಟ್ಟಳು. ತರುವಾಯ ಹೊತ್ತಾಗಿ ಹೋದುದಕ್ಕೆ ಗಂಡನು ಎಷ್ಟು ಕೋಪದಿಂದ ಉರಿದು ಬೀಳುವನೋ ಎಂದು ಹೆದರುತ್ತ ನೀರು ತೆಗೆದುಕೊಂಡು ಆಶ್ರಮಕ್ಕೆ ಬಂದಳು.

ಮೊದಲೇ ಕೋಪಿಷ್ಠನಾದ ಜಮದಗ್ನಿ ಅವಳ ಮನಸ್ಸಿನ ಚಾಂಚಲ್ಯವನ್ನು ತಿಳಿದು, ತನ್ನಂತಹ ಮುನಿಗೆ ತಕ್ಕ ಪತ್ನಿಯಾಗಿರಲು ಅವಳು ಯೋಗ್ಯಳಲ್ಲವೆಂದು ಸಿಟ್ಟಿನಿಂದ ಉರಿದು, ಅವಳನ್ನು ದೂರ ಒಯ್ದು ಕೊಂದು ಬರುವಂತೆ ತನ್ನ ಕುಮಾರರಿಗೆ ಆಜ್ಞೆ ಮಾಡಿದನು. ನಾಲ್ಕು ಮಂದಿ ಕುಮಾರರೂ ಮಾತೃವಧೆ ತಮ್ಮಿಂದಾಗದೆಂದು ನಿರಾಕರಿಸಿಬಿಟ್ಟರು. ಆದರೆ ಪಿತೃವಾಕ್ಯ ಪಾಲನೆಯೇ ಧರ್ಮವೆಂದು ದೃಢವಾಗಿ ನಂಬಿದ ರಾಮನು ತಂದೆಯ ಆಜ್ಞೆಯಂತೆ ತಾಯಿಯನ್ನು ದೂರ ಕರೆದುಕೊಂಡು ಹೋಗಿ ಕೊಂದು, ರಕ್ತದ ಕತ್ತಿಯೊಂದಿಗೆ ತಂದೆಯ ಮುಂದೆ ಬಂದು ನಿಂತು, ತಾಯಿಯನ್ನು ಕೊಂದುಬಿಟ್ಟೆನೆಂದು ಹೇಳಿದನು.

ಜಮದಗ್ನಿ ಅವನ ಪಿತೃವಾಕ್ಯ ಪರಿಪಾಲನೆಗಾಗಿ ಸಂತೋಷಪಟ್ಟು, "ನಿನಗೇನು ವರ ಬೇಕೋ ಕೇಳು ಕಂದಾ" ಎಂದನು.

"ನನ್ನ ತಾಯಿಯನ್ನು ಬದುಕಿಸಿ ಕೊಡಿ ಅಪ್ಪಾ" ಎಂದನು ರಾಮ. ಜಮದಗ್ನಿ ಹಾಗೆಯೇ ರೇಣುಕೆಯನ್ನು ಮತ್ತೆ ಬದುಕಿಸಿದನು. ರಾಮನ ಪಿತೃನಿಷ್ಠೆಗೆ ಸಂತುಷ್ಟನಾದ ಜಮದಗ್ನಿ ಅವನ ಕೈಗೊಂದು ಪರಶುವನ್ನು ಕೊಟ್ಟು, ಅಪಜಯವಾಗದಂತೆ ವಿಶೇಷ ವರವನ್ನೂ ಕೊಟ್ಟನು. ಅಂದಿನಿಂದ ತಂದೆ ಕೊಟ್ಟ ಕೊಡಲಿಯನ್ನೇ ಆಯುಧವನ್ನಾಗಿ ಇಟ್ಟುಕೊಂಡ

ರಾಮುನಿಗೆ ಪರಶುರಾಮನೆಂಬ ಹೆಸರು ಬಂದಿತು. ಒಂದು ಸಾರಿ ಪರಶುರಾಮನು ತನ್ನ ತಾತನನ್ನು ನೋಡಬೇಕೆಂದು ಋಚೀಕನ ಆಶ್ರಮಕ್ಕೆ ಹೋದನು. ಅಲ್ಲಿ ಕೆಲವು ದಿನಗಳಿದ್ದ ಮೇಲೆ, ಔರ್ವನ ಆಶ್ರಮಕ್ಕೆ ಹೋದನು. ಔರ್ವನು ಭೃಗು ವಂಶಕ್ಕೆ ಸೇರಿದ ಚ್ಯವನನ ಮಗ. ಅಲ್ಲಿ ಪರಶುರಾಮನು ಸ್ವಲ್ಪ ಕಾಲ ವಿದ್ದು, ಔರ್ವನಿಂದ ಅಪ್ಪಣೆ ಪಡೆದು, ಜಮದಗ್ನಿಯ ತಾತನೂ, ತನ್ನ ಮುತ್ತಾನೂ ಆದ ಭೃಗುವಿನ ಆಶ್ರಮಕ್ಕೆ ಹೋದನು. ಇವನು ದೂರದಿಂದ ಬರುವಾಗ ಇವನ ಶರೀರದಿಂದ ಹೊರಡುವ ತೇಜಸ್ಸಿನ ಕಾಂತಿಯನ್ನು ನೋಡಲಾಗದೆ ಭೃಗುವಿನ ಶಿಷ್ಯರು ಕಣ್ಣುಗಳನ್ನು ಮುಚ್ಚಿಕೊಂಡರು.

ಭೃಗು ತನ್ನ ಮರಿಮೊಮ್ಮಗನನ್ನು ನೋಡಿ ಅತ್ಯಂತ ಪ್ರೇಮದಿಂದ ಆದರಿಸಿ ಬೆನ್ನು ತಡವುತ್ತ, "ಕಂದಾ, ನಿನಗೂ, ನಮಗೂ, ಲೋಕಕ್ಕೂ ಒಳ್ಳೆಯದಾಗುವಂತಹ ಮಾತುಗಳನ್ನು ಹೇಳುತ್ತೇನೆ, ಕೇಳು. ನಿನ್ನಿಂದ ಮಹತ್ಕಾರ್ಯವಾಗಲಿದೆ. ನೀನು ಹಿಮಾಲಯಕ್ಕೆ ಹೋಗಿ ಶಿವನನ್ನು ಧ್ಯಾನಿಸಿ ತಪಸ್ಸು ಮಾಡು. ನಿನ್ನ ಮನಸ್ಸಿನಲ್ಲಿರುವ ಕೋರಿಕೆಗಳೆಲ್ಲಾ ಫಲಿಸುತ್ತವೆ." ಎಂದನು.

ಪರಶುರಾಮನು ಭೃಗು ಹೇಳಿದಂತೆಯೇ ಹಿಮಾಲಯಕ್ಕೆ ಹೋಗಿ, ತಪಸ್ಸನ್ನು ಪ್ರಾರಂಭಿಸಿದನು. ತಪಸ್ಸಿನಲ್ಲಿರುವ ಅವನ ಏಕಾಗ್ರತೆಯ ದೃಢ ದೀಕ್ಷೆಯನ್ನು ನೋಡಿ ಹಿಮಾಲಯದ ಮೇಲೆ ತಪಸ್ಸು ಮಾಡುತ್ತಿದ್ದ ಇತರ ಮುನಿಗಳಿಗೆ ಆಶ್ಚರ್ಯವಾಯಿತು.

ಒಂದು ದಿನ ಶಿವನು ಅವನನ್ನು ಪರೀಕ್ಷೆ ಮಾಡಬೇಕೆಂದುಕೊಂಡು ಬೇಡನ ವೇಷದಲ್ಲಿ ಅವನ ಮುಂದೆ ಪ್ರತ್ಯಕ್ಷನಾಗಿ, "ಯಾರಯ್ಯ ನೀನು? ಇಲ್ಲಿಗೆ ಏತಕ್ಕೆ ಬಂದೆ?" ಎಂದು ಕೇಳಿದನು.

ಪರಶುರಾಮನು ಕಣ್ಣು ಬಿಡಿಸಿ ಬೇಡನನ್ನು ನೋಡಿ ವಿನಯದಿಂದ ಅವನ ಪ್ರಶ್ನೆಗೆ ಉತ್ತರ ಕೊಟ್ಟನು.

ಅದನ್ನು ಕೇಳಿಕೊಂಡು ಬೇಡನು ಹೊರಟು ಹೋಗುವುದಕ್ಕೆ ಬದಲಾಗಿ ಪರಶುರಾಮನನ್ನು ನೋಡುತ್ತ ಸುಮ್ಮನೆ ನಿಂತನು. "ಇನ್ನೂ ಏಕೆ



ನಿಂತಿರುವೆ? ಹೀಗೆ ನಿಂತು ನನ್ನ ತಪಸ್ಸಿಗೆ ವಿಘ್ನ ತರಬೇಡ. ಬೇಕಾದರೆ ನೀನು ನನ್ನ ಹಾಗೆಯೇ ತಪಸ್ಸಿಗೆ ಕುಳಿತುಕೋ. ಶಿವನನ್ನು ಧ್ಯಾನಿಸಿ ತಪಸ್ಸು ಮಾಡು" ಎಂದನು ಪರಶುರಾಮ.

"ನನ್ನನ್ನು ತಪಸ್ಸುಮಾಡುವಂತೆ ಹೇಳಲು ನೀನು ಯಾರು? ನಾನು ನಿಲ್ಲುವುದಕ್ಕೂ ನಡೆಯುವುದಕ್ಕೂ ನಿನ್ನ ಅಪ್ಪಣೆ ಕೇಳಬೇಕೇನು?" ಎಂದನು ಬೇಡ. ಇಬ್ಬರಿಗೂ ಸ್ವಲ್ಪ ವಾಗ್ವಿವಾದ ನಡೆಯಿತು. ಈ ಬೇಡನು ತನ್ನ ಅಹಂಕಾರವನ್ನು ಪರೀಕ್ಷಿಸಲು ಬಂದ ಯಾವ ಮಹಾಪುರುಷನೋ ಎಂದುಕೊಂಡು ಪರಶು ರಾಮನು ಅವನ ಮುಂದೆ ಸಾಷ್ಟಾಂಗವಾಗಿ ಬಿದ್ದನು.

ಶಿವನು ಬಹಳ ಸಂತೋಷಪಟ್ಟು ಪರಶುರಾಮನನ್ನು ಎಬ್ಬಿಸಿ, ತಾನು ಯಾರೆಂಬುದನ್ನು ತೋರಿಸಿ, "ಅಪ್ಪಾ, ನೀನು ಇನ್ನೂ ಚಿಕ್ಕವ. ರೌದ್ರಾಸ್ತ್ರವನ್ನು ಭರಿಸುವ ಶಕ್ತಿ ನಿನಗಿನ್ನೂ ಬಂದಿಲ್ಲ. ಆದುದರಿಂದ ಸ್ವಲ್ಪಕಾಲ ತೀರ್ಥಯಾತ್ರೆಮಾಡಿ ಬಾ" ಎಂದು ಹೇಳಿ ಅಂತರ್ಧಾನನಾದನು.

ಅದರಂತೆ ಪರಶುರಾಮನು ತಾತ್ಕಾಲಿಕವಾಗಿ ತಪಸ್ಸನ್ನು ಕಟ್ಟಿಟ್ಟು, ತೀರ್ಥಯಾತ್ರೆಮಾಡಿ ಬಂದನು. ಆ ಮೇಲೆ ಮತ್ತೆ ಕುಳಿತು ತಪಸ್ಸಿಗೆ ಪ್ರಾರಂಭಿಸಿದನು.

ಹೀಗಿರುವಾಗ ಇಂದ್ರನು ದೇವತೆಗಳನ್ನು ತನ್ನೊಂದಿಗೆ ಕರೆದುಕೊಂಡು ಶಿವನ ಬಳಿಗೆ ಬಂದು "ಮಹಾದೇವಾ! ದಾನವರು ನಮ್ಮ ನಗರದೊಳಗೆ ನುಗ್ಗಿ ನಾಶಮಾಡುತ್ತಿದ್ದಾರೆ. ಅವರನ್ನು ಓಡಿಸಲು ನಮ್ಮಿಂದಾಗಲಿಲ್ಲ. ನೀನೇ ನಮ್ಮನ್ನು ಕಾಪಾಡಬೇಕು" ಎಂದು ಬೇಡಿಕೊಂಡನು.

ಶಿವನು ಮಹೋದರನೆಂಬ ಗಣನಾಯಕನನ್ನು ಕರೆದು, ಪರಶುರಾಮನನ್ನು ಕರೆದುಕೊಂಡು ಬರಲು ಹೇಳಿದನು. ಶಿವನು ಕರೆಯುವನೆಂದು ಕೇಳಿ ಪರಶು ರಾಮನು ಕೂಡಲೇ ತಪಸ್ಸಿನಿಂದೆದ್ದು ಶೀಘ್ರವಾಗಿ ಶಿವನ ಬಳಿಗೆ ಬಂದನು.

"ಪರಶುರಾಮಾ, ಇಂದ್ರನ ನಗರವನ್ನು ದಾನವರು ನಾಶಮಾಡುತ್ತಿದ್ದಾರಂತೆ. ನೀನು ಹೋಗಿ ದಾನವರನ್ನೆಲ್ಲ ಓಡಿಸಿ ಬಂದುಬಿಡು" ಎಂದನು ಶಿವ.



"ಮಹಾದೇವ! ನಿನಗೆ ಗೊತ್ತಿಲ್ಲದ್ದೇನಿದೆ? ದಾನವರು ಮಹಾ ಬಲವಂತರು. ಅವರನ್ನು ನಾನೊಬ್ಬನು ಹೋಗಿ ಹೇಗೆ ಜಯಿಸಬಲ್ಲೆ?" ಎಂದು ಪರಶುರಾಮನು ಶಿವನನ್ನು ಕೇಳಿದನು.

ಆಗ ಶಿವನು ಪರಶುರಾಮನ ಪರಶುವನ್ನು ತೆಗೆದುಕೊಂಡು ಅದರಲ್ಲಿ ತನ್ನ ತೇಜಸ್ಸನ್ನು ಊಡಿಸಿ ಪರಶುರಾಮನಿಗೆ ಕೊಟ್ಟು, "ಈಗ ಹೋಗು" ಎಂದನು.

ಪರಶುರಾಮನು ಶಿವಶಕ್ತಿಯ ಪರಶುವಿನೊಂದಿಗೆ ಇಂದ್ರನ ನಗರಕ್ಕೆ ಹೋಗಿ ಅಲ್ಲಿದ್ದ ದಾನವರನ್ನೆಲ್ಲಾ ಹೊಡೆದೋಡಿಸಿದನು. ಅವನನ್ನು ಇದಿರಿಸಿದವರು ನೆಲ ಹಿಡಿದರು. ಆ ಮೇಲೆ ಇಂದ್ರನಿಗೆ ನಗರವನ್ನು ಒಪ್ಪಿಸಿಕೊಟ್ಟು, ಮತ್ತೆ ಹೋಗಿ ಯಥಾಪ್ರಕಾರ ತಪಸ್ಸಿಗೆ ಕುಳಿತನು.

ಕಡೆಗೆ ಅವನ ಭಕ್ತಿಗೂ ದೀಕ್ಷೆಗೂ ಮೆಚ್ಚಿ ಶಿವನು ಅವನಿಗೆ ಭಾರ್ಗವಾಸ್ತ್ರವನ್ನು ಪ್ರಸಾದಿಸಿ, ಇನ್ನು ತಪಸ್ಸನ್ನು ಸಾಕುಮಾಡುವಂತೆ ಹೇಳಿದನು.

ಪರಶುರಾಮನು ಹಿಮಾಲಯದಿಂದ ಹೊರಟು ತನ್ನ ತಂದೆ ತಾಯಿಗಳನ್ನು ನೋಡಲು ಬರುವಾಗ, ದಾರಿಯಲ್ಲಿ ಒಂದು ಹೆಬ್ಬುಲಿ ಒಬ್ಬ ಬ್ರಾಹ್ಮಣ ಬಾಲನ ಮೇಲೆ ಬೀಳುವ ದೃಶ್ಯವನ್ನು ನೋಡಿದನು. ಬಾಲನನ್ನು ರಕ್ಷಿಸಲು ಪರಶುರಾಮನು ಹುಲಿಯನ್ನು ಬ್ರಹ್ಮಾಸ್ತ್ರದಿಂದ ಹೊಡೆದನು. ಆ ಪೆಟ್ಟಿನಿಂದ ನೆಲಕ್ಕೆ ಹೊರಳಿಬಿದ್ದ ಹುಲಿ, ಒಬ್ಬ ಗಂಧರ್ವನ ರೂಪ ಧರಿಸಿ ಎದ್ದು ನಿಂತಿತು. ಅವನು ಪರಶುರಾಮನಿಗೆ ನಮಸ್ಕರಿಸಿ, ತಾನು ಶಾಪದಿಂದ ಹುಲಿಯಾಗಿದ್ದು, ಈಗ ಬ್ರಹ್ಮಾಸ್ತ್ರದಿಂದ ಶಾಪವಿಮೋಚನೆಯನ್ನು ಕೊಡಿಸಿದುದಕ್ಕೆ ಕೃತಜ್ಞತೆಯನ್ನು ತಿಳಿಸಿ, ತನ್ನ ಲೋಕಕ್ಕೆ ಹೊರಟು ಹೋದನು.

ಹೆಬ್ಬುಲಿಯಿಂದ ರಕ್ಷಿಸಲ್ಪಟ್ಟ ಆ ಬಾಲನ ಹೆಸರು ಅಕೃತವ್ರಣ. ಶಾಂತನೆಂಬ ಮುನಿ ಅವನ ತಂದೆಯಾಗಿದ್ದನು. ತಂದೆಯೊಂದಿಗೆ ತೀರ್ಥಯಾತ್ರೆಮಾಡುತ್ತಿದ್ದಾಗ ದಾರಿ ತಪ್ಪಿ ನಿರ್ಜನ ಪ್ರದೇಶದಲ್ಲಿ ಹುಲಿಯ ಬಾಯಿಗೆ ಬೀಳಲಿದ್ದವನನ್ನು ಪರಶುರಾಮನು ರಕ್ಷಿಸಿದ್ದನು. ತನ್ನನ್ನು ಕಾಪಾಡಿದ ಪರಶುರಾಮನನ್ನು ಬಿಡದೆ ಅಕೃತವ್ರಣನು ಅವನ ಸೇವೆಯಲ್ಲೇ ಇರುವೆನೆಂದು ಹೇಳಿದನು. ಅದರಂತೆಯೇ ಅವನು ಪರಶುರಾಮನಿಗೆ ಶಿಷ್ಯನಾಗಿಯೂ ಸ್ನೇಹಿತನಾಗಿಯೂ ಜೀವಿತಾಂತದವರೆಗೂ ಇದ್ದನು.

ಪರಶುರಾಮನು ಅಕೃತವ್ರಣನೊಂದಿಗೆ ಭೃಗುವಿನ ಆಶ್ರಮಕ್ಕೂ, ಔರ್ವನ ಆಶ್ರಮಕ್ಕೂ, ಋಚೀಕನ ಆಶ್ರಮಕ್ಕೂ ಹೋಗಿ ಅಲ್ಲಿನವರಿಗೆಲ್ಲಾ ಸಂತೋಷವನ್ನುಂಟುಮಾಡಿದನು. ಅವನ ಕತೆಯನ್ನು ಕೇಳಿ ಅವರೆಲ್ಲಾ ತುಂಬಾ ಮೆಚ್ಚಿದರು.

—(ಮುಂದುವರಿಯುವುದು)





# ದುಷ್ಟ ಧನದ ದಾನ

ಪಾಂಡವರ ವಂಶಕ್ಕೆ ಸೇರಿದ ಜನಮೇಜಯನ ಮಗನಾದ ಶತಾನೀಕನು ಅನೇಕ ದೇಶಗಳನ್ನು ಜಯಿಸಿ, ಆ ದೇಶಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಅದರೊಂದಿಗೆ ಅಪಾರವಾದ ಸಂಪತ್ತೂ ಸೇರಿತು.

ಆ ಧನದಿಂದ ಶತಾನೀಕನು ಬ್ರಾಹ್ಮಣರಿಗೆ ಎಡೆ ಬಿಡದೆ ದಾನಧರ್ಮಗಳನ್ನು ಮಾಡಿ, ಅವರ ಆದರಾಭಿಮಾನಗಳಿಗೆ ಪಾತ್ರನಾದನು. ಅವರು ಅವನನ್ನು ಸಾವಿರಾರು ಬಾಯಿಗಳಿಂದ ಹೊಗಳುತ್ತಿದ್ದರು.





ಶತಾನೀಕನು ಸತ್ತುಹೋದ ಮೇಲೆ ಅವನ ಮಗ ಸಹಸ್ರಾನೀಕನು ಪಟ್ಟಕ್ಕೆ ಬಂದನು. ಅವನು ಕೂಡಾ ಶೌರ್ಯ ಪರಾಕ್ರಮಗಳುಳ್ಳವನಾದರೂ, ತಂದೆಯ ಹಾಗೆ ದಂಡಯಾತ್ರೆ ಮಾಡುವ ಗುಣದವನಾಗಿರಲಿಲ್ಲ.



ಸತ್ತುಹೋದ ರಾಜನಿಂದ ಆಗಾಗ ದಾನಧರ್ಮಗಳನ್ನು ಪಡೆದುಕೊಂಡು ಬಂದ ಬ್ರಾಹ್ಮಣರು, ಹೊಸ ರಾಜನ ಮೇಲೆ ಬೇಸರ ಪಡುತ್ತ, ಹಳೆಯ ಸಂಪ್ರದಾಯವನ್ನು ಬಿಡದೆ ನಡೆಸಬೇಕೆಂದು ಕೇಳಿಕೊಂಡರು.

"ನನ್ನ ತಂದೆಗೆ ಆ ಸಂಪ್ರದಾಯವು ಒಳ್ಳೆಯದನ್ನು ಮಾಡಿದ್ದರೆ ನಾನು ಆದರಂತೆ ನಡೆಸುತ್ತೇನೆ." ಎಂದನು ಸಹಸ್ರಾನೀಕ. ದಾನಗಳ ಮಹಿಮೆಯಿಂದ ಶತಾನೀಕನಿಗೆ ಏನು ಒಳಿತಾಯಿತೆಂದು ಬ್ರಾಹ್ಮಣರು ಭಾರ್ಗವ ಮಹರ್ಷಿಯನ್ನು ಕೇಳಿದರು.





ಅದನ್ನು ತಿಳಿಯಲು ಭಾರ್ಗವನು ಸಮಾಧಿಯೊಳಗೆ ಹೋಗಿ, ಆತ್ಮ ಶರೀರಿಯಾಗಿರುವ ಶತಾನೀಕನನ್ನು ಹುಡುಕುತ್ತಾ ಸ್ವರ್ಗಕ್ಕೆ ಹೋದನು, ಸ್ವರ್ಗದಲ್ಲಿ ಶತಾನೀಕನ ಜಾಡೇ ಇರಲಿಲ್ಲ.

ತರುವಾಯ ಭಾರ್ಗವನು ನರಕಕ್ಕೆ ಹೋಗಿ ನೋಡುವಾಗ ಶತಾನೀಕನು ನರಕದಲ್ಲಿ ನರಳುತ್ತಿದ್ದನು! "ನಾನು ಅಕ್ರಮವಾಗಿ ಧನ ಸಂಪಾದಿಸಿದ್ದು ಮೊದಲನೇ ಪಾಪವಾಯಿತು, ಸುಖಸಂಪದಗಳಲ್ಲಿರುವ ಬ್ರಾಹ್ಮಣರಿಗೆ ದಾನ ಮಾಡಿದ್ದು ಎರಡನೇ ಪಾಪವಾಯಿತು." ಎಂದನು ಶತಾನೀಕ.





ಭಾರ್ಗವನು ಸಹಸ್ರಾನೀಕನ ಬಳಿಗೆ ಹೋಗಿ, ತಾನು ತಿಳಿದ ಸಂಗತಿಯನ್ನು ಹೇಳಿದನು. ನ್ಯಾಯಾರ್ಜಿತವಾದ ಧನವನ್ನು ಮಾತ್ರವೇ ದಾನ ಮಾಡಬೇಕೆಂದೂ, ಹಾಗೆ ಮಾಡಿದರೆ ಮಾತ್ರ ಆ ಪುಣ್ಯದಿಂದ ಅವನ ತಂದೆ ಸ್ವರ್ಗಕ್ಕೆ ಹೋಗುವರೆಂದೂ ಹೇಳಿದನು ಭಾರ್ಗವ.

ಮರುದಿನ ಸಹಸ್ರಾನೀಕನು ದೇಶಾಂತರಗಳಿಗೆ ಹೋಗಿ, ಅಲ್ಲಿ ಶ್ರಾಮಿಕನಾಗಿ ಕಷ್ಟಪಟ್ಟು ಜೀವಿಸುತ್ತ, ಒಂದು ವರ್ಷದ ಮೇಲೆ ಉಳಿದಿದ್ದ ಸ್ವಲ್ಪಮಾತ್ರ ಧನದೊಂದಿಗೆ ತನ್ನ ಭವನಕ್ಕೆ ಹಿಂದಿರುಗಿ ಬಂದನು.





ಅವನು ತನ ಸಂಪಾದನೆಯನ್ನು ಬ್ರಾಹ್ಮಣರಿಗೆ ದಾನ ಮಾಡುತ್ತ, "ಈ ದಾನವು ಅಲ್ಪ ವಾದರೂ ನ್ಯಾಯಾರ್ಜಿತವಾದುದು. ದಯ ಮಾಡಿ ಇದನ್ನು ಸ್ವೀಕರಿಸಿ ನನ್ನ ತಂದೆಗೆ ಉತ್ತಮಲೋಕ ಸಿಗುವ ಹಾಗೆ ಆಶೀರ್ವಾದ ಮಾಡಿರಿ" ಎಂದನು. ಬ್ರಾಹ್ಮಣರು "ಹಾಗೇ ಆಗಲಿ" ಎಂದರು.

ತರುವಾಯ ಸಹಸ್ರಾನೀಕನು ತನ್ನ ಖಜಾನೆ ಯನ್ನು ತೆರೆಯಿಸಿ, ತನ್ನ ತಂದೆ ಕೂಡಿ ಹಾಕಿದ್ದ ಧನವನ್ನೆಲ್ಲಾ ಬಡಬಗ್ಗರಿಗೂ ಅನಾಥರಿಗೂ ಹಂಚಿ ಕೊಟ್ಟುಬಿಟ್ಟನು. ಆಮೇಲೆ ಅವನು ಭಾರ್ಗವನನ್ನು ಕರೆದು, ತನ್ನ ತಂದೆಯ ಪರಿಸ್ಥಿತಿ ಹೇಗಿದೆಯೆಂದು ತಿಳಿದುಕೊಂಡು ಬರಲು ಕೇಳಿಕೊಂಡನು.







ಭಾರ್ಗವನು ಮತ್ತೊಂದುಸಾರಿ ನರಕಕ್ಕೆ ಹೋದನು. ಅಲ್ಲಿ ಶತಾನೀಕನ ಪಾಪಗಳು ಪರಿಹಾರವಾಗಿದ್ದುವು. ಅವನು ಬಂಗಾರದ ರಥದಲ್ಲಿ ಸ್ವರ್ಗಕ್ಕೆ ಹೊರಡುವ ದೃಶ್ಯ ನೋಡಿ, ಭಾರ್ಗವನಿಗೆ ಸಂತೋಷವಾಯಿತು.

# ಯಾರಿಗೆ ಪಟ್ಟ!

ಒಬ್ಬ ರಾಜನಿಗೆ ಮೂವರು ಕುಮಾರರಿದ್ದರು. ಮೂವರೂ ಪ್ರಾಯಸಮರ್ಥರಾಗಿ ಬೆಳೆದರು. ತನ್ನ ಅನಂತರ ರಾಜನಾಗಿ ಪರಿಪಾಲನೆ ನಡೆಸಲು ಯಾರು ಅರ್ಹನೆಂದು ತಿಳಿಯಬೇಕೆಂದು ತೋರಿತು ರಾಜನಿಗೆ. ಅವನು ಮೂವರು ಕುಮಾರರ ಕೈಗೂ ಒಂದೊಂದು ಲಕ್ಷ ವರಹ ಕೊಟ್ಟು, "ಈ ಧನದಿಂದ ಯಾರು ಹೆಚ್ಚು ಸಮರ್ಥತೆಯನ್ನು ತೋರಿಸುವಿರೋ ಅವನಿಗೆ ಯುವರಾಜ ಪಟ್ಟಾಭಿಷೇಕ ಮಾಡುತ್ತೇನೆ," ಎಂದು ಹೇಳಿ ಆರು ತಿಂಗಳು ಗುಡುವನ್ನೂ ಇಟ್ಟನು.

ಆರು ತಿಂಗಳು ಕಳೆದುವು. ರಾಜಕುಮಾರರು ಮೂವರೂ ರಾಜನ ಸಭೆಗೆ ಬಂದರು.

"ನೀವು ಕೊಟ್ಟ ಹಣದಿಂದ ನಾನು ಶಾಸ್ತ್ರ ಗ್ರಂಥಗಳನ್ನೂ, ಧರ್ಮ ಗ್ರಂಥಗಳನ್ನೂ ಬರೆಯಿಸಿ ಪ್ರಜೆಗಳಿಗೆ ಉಚಿತವಾಗಿ ಕೊಟ್ಟು ಪ್ರಚಾರಪಡಿಸಿದೆನು" ಎಂದು ಹಿರಿಯವನು ಹೇಳಿದನು.

"ನಾನು ಯಾವಾಗೆಂದರಾವಾಗ, ಎಲ್ಲೆಂದರಲ್ಲಿ ಮಳೆಬರಿಸುವ ಮಂತ್ರಕ್ರಿಯೆಯನ್ನು ಕಲಿತುಕೊಂಡು ಬಂದೆನು. ನಮ್ಮ ದೇಶಕ್ಕೆ ನೀರಿನ ಕಷ್ಟ ಎಂದಿಗೂ ಬಾರದು. ಕ್ಷಾಮದ ಹೆಸರೇ ಇಲ್ಲದಂತೆ ದೇಶ ಸುಭಿಕ್ಷವಾಗಿರುತ್ತದೆ." ಎಂದನು ಎರಡನೇ ಕುಮಾರ.

"ನನ್ನ ಹಣದ ಸಹಾಯದಿಂದ ಸೇನೆಗಳನ್ನೂ ಸೇನಾಧಿಪತಿಗಳನ್ನೂ ನನ್ನ ಪಕ್ಷಕ್ಕೆ ಮಾಡಿಕೊಂಡೆನು. ಈಗ ಈ ಅರಮನೆಯನ್ನು ನನ್ನ ಸೇನೆಗಳೇ ಮುತ್ತಿಗೆ ಹಾಕಿವೆ. ನೀವು ನನಗೆ ಯುವರಾಜ ಪಟ್ಟಾಭಿಷೇಕ ಮಾಡಿಬಿಡುವುದೇ ಒಳ್ಳೆಯದು ಅಪ್ಪಾ!" ಎಂದನು ಮೂರನೇ ಮಗ.

ಆ ದಿನವೇ ಮೂರನೆಯವನಿಗೆ ಯುವರಾಜ ಪಟ್ಟಾಭಿಷೇಕವಾಯಿತು.





# ಆಶೆಯ ಮಹಿಮೆ

ಒಂದು ಊರಿನಲ್ಲಿ ಈಸಣ್ಣ ನಾಯಕನೆಂಬವನು ತನ್ನ ಮನೆಯಲ್ಲಿಯೇ ಚಿಲ್ಲರೆ ಯಂಗಡಿಯನ್ನು ಇಟ್ಟುಕೊಂಡು. ಕೆಲವು ಮೇಕೆಗಳನ್ನು ಕೂಡಾ ಬೆಳೆಸಿಕೊಂಡಿದ್ದನು. ಅವನ ಹೆಂಡತಿಗೆ ನಗಗಳ ಮೇಲೆ ಶೀರೆಗಳ ಮೇಲೆ ತುಂಬ ಮೋಜು. ಅವಳ ವಿಶೇಷ ಖರ್ಚುಗಳಿಗಾಗಿ ಈಸಣ್ಣ ನಾಯಕನು ಮೇಕೆಗಳನ್ನು ಬೆಳೆಸುತ್ತಿದ್ದನು. ಅವಳ ಹೆಚ್ಚಿನ ಖರ್ಚಿಗೆ ಒಂದೊಂದು ಮೇಕೆಯನ್ನು ಮಾರುತ್ತಿದ್ದನು.

ಹೀಗಿರುವಾಗ ಸಂಕ್ರಾಂತಿ ಹಬ್ಬ ಬಂತು. ಈಸಣ್ಣನ ಹೆಂಡತಿ ಹೊಸ ಶೀರೆ ಕೊಂಡುಕೊಳ್ಳಬೇಕೆಂದು ಪಟ್ಟು ಹಿಡಿದಳು. ಅದಕ್ಕಾಗಿ ಈಸಣ್ಣನು ನೆರೆಯ ಊರಿನಲ್ಲಿ ನಡೆಯುವ ಸಂತೆಗೆ ಒಂದು ಮೇಕೆಯನ್ನು ತೆಗೆದುಕೊಂಡು ಹೋದನು. ಸಂತೆಗೆ ಹೋಗಿ ತಲಪಿದಾಗ ದೊಡ್ಡ ಮಳೆಯೇ ಬಂದು ಬಿಟ್ಟಿತು. ಆದುದರಿಂದ ಸಂತೆಯಲ್ಲಿ ಜನರು ತುಂಬಾ ಕಡಿಮೆ. ವ್ಯಾಪಾರವೂ ಬಹಳ ಮಂದ. ಈಸಣ್ಣನ ಮೇಕೆಗೆ ಸರಿಯಾದ ಬೆಲೆ ಕೊಡುವ ಗಿರಾಕಿ ಬರಲಿಲ್ಲ. ಬಂದವರು ಹತ್ತು ಹನ್ನೆರಡಕ್ಕಿಂತ ಮೇಲೆ ಸಾಧ್ಯವಿಲ್ಲವೆಂದು ಬಿಟ್ಟರು. ಈಸಣ್ಣನಿಗೆ ಇಪ್ಪತ್ತು ರೂಪಾಯಿಗಳಿಗಿಂತ ಕಡಿಮೆಗೆ ಮೇಕೆಯನ್ನು ಮಾರಲು ಇಷ್ಟವಿಲ್ಲ. ಆದುದರಿಂದ ಸಾಯಂಕಾಲದ ವರೆಗೂ ಒಳ್ಳೆಯ ಗಿರಾಕಿಗಾಗಿ ಎದುರು ನೋಡಿದನು. ಕಡೆಗೆ ನಿರುತ್ಸಾಹದಿಂದ ಮೇಕೆಯೊಂದಿಗೆ ಮನೆಗೆ ಹಿಂದಿರುಗಿ ಹೊರಟನು.

ಗುಡ್ಡಗಾಡುದಾರಿ. ಊರು ದಾಟಿ ಗುಡ್ಡದ ಪಾರ್ಶ್ವದಿಂದಾಗಿ ಸಾಗಬೇಕು. ಗುಡ್ಡದ ಪಾರ್ಶ್ವದಲ್ಲಿರುವ ದೊಡ್ಡದೊಂದು ಗುಹೆಯೊಳಗೆ ಪಿಶಾಚಿಗಳಿವೆಯೆಂದು ಜನರು ಹೇಳುತ್ತಿದ್ದರು. ಅದರ ಹತ್ತಿರ ಬರುವಾಗ ಈಸಣ್ಣನಿಗೆ ಗುಂಡಿಗೆ ದಡದಡವೆನ್ನತೊಡಗಿತು. ಆಗ ಚೆನ್ನಾಗಿ ಕತ್ತಲಾಗಿ ಬಿಟ್ಟಿತ್ತು.

ಬೇಗನೇ ಆ ಜಾಗವನ್ನು ದಾಟಿ ಬಿಡಬೇಕೆಂದು ಈಸಣ್ಣ ನಾಯಕನು ಮೇಕೆಯನ್ನು ಎಳೆದುಕೊಂಡು ಬೇಗ ಬೇಗನೇ ನಡೆಯುತ್ತಿದ್ದನು. ಗುಹೆಯ ಬದಿಯನ್ನು ದಾಟಿದನೋ ಇಲ್ಲವೋ, ಅಷ್ಟರಲ್ಲಿ "ಯಾರೋದು? ಕತ್ತಲೆಯಾದ ಮೇಲೆ ಈ ಕಡೆಗೆ ಬರುವವನೂ? ನಿಲ್ಲೋ!" ಎಂಬ ಮಾತು ಗುಹೆಯೊಳಗಿನಿಂದ ಭಯಂಕರವಾಗಿ ಹೊರಟು ಬಂತು. ಈಸಣ್ಣನು ಒಣಹುಲ್ಲಿನ ಕಡ್ಡಿಯಂತೆ ನಡುಗುತ್ತ

ಎಂ. ಕೆ. ಈಶ್ವರರಾವ್



"ನಾನು ಈಸಣ್ಣ ನಾಯಕ! ಈ ಮೇಕೆಯನ ಮಾರ ಬೇಕೂಂತ ನೋಡುವುದರಲ್ಲಿ ಕತ್ತಲಾದ್ದು ಗೊತ್ತಾಗ ಲಿಲ್ಲ. ಇನ್ನೆಂದಿಗೂ ಕತ್ತಲಾದ ಮೇಲೆ ಇಲ್ಲಿಗೆ ಬರೋ ದಿಲ್ಲ. ಈ ಸಾರಿ ಕ್ಷಮಿಸು ಮಹಾಭೂತನೇ!" ಎಂದನು.

"ಹೂಂ. ಆ ಮೇಕೆಯನ ನನ್ನ ಗುಹೆ ಒಳಗೆ ದೂಡಿ ನಿನ್ನ ದಾರಿ ಹಿಡಿದು ಹೋಗಿಬಿಡು. ನಾಳೆ ಬೆಳಗಾಗುವುದರೊಳಗೆ ಬಂದು ಅದರ ಬೆಲೆ ತೆಗೆದು ಕೊಂಡು ಹೋಗು" ಎಂಬ ಮಾತುಗಳು ಗುಹೆ ಯೊಳಗಿನಿಂದ ಕೇಳಿಸಿದುವು,

"ಬದುಕಿದೆಯಾ ಬಡಜೀವವೇ" ಎಂದುಕೊಂಡು ಈಸಣ್ಣನು ಮೇಕೆಯನ್ನು ಗುಹೆಯೊಳಗೆ ದೂಡಿ, ಓಡು ನಡಿಗೆಯಿಂದ ಊರಿನ ಕಡೆಗೆ ಸಾಗಿದನು. ಆದರೆ ಮನೆಗೆ ಹೋಗಲು ಅವನಿಗೆ ಧೈರ್ಯವಿಲ್ಲ. ಮೇಕೆ ಮಾರಿದ ಹಣ ಎಲ್ಲಿ ಎಂದು ಅವನ ಹೆಂಡತಿ ಪ್ರಾಣ ತೆಗೆಯುತ್ತಾಳೆ. ಆ ಪಿಶಾಚಿ ಏನು ಕೊಡು ವುದೋ ಏನೋ? ಕೈಯಲ್ಲಿ ಹಣ ತೆಗೆದುಕೊಂಡು ಹೋಗದಿದ್ದರೆ ಅವಳು ಮನೆಯ ಹೊಸ್ತಿಲು ದಾಟಲು ಬಿಡಲಾರಳು.

ಆದುದರಿಂದ ಈಸಣ್ಣನು ಬೆಳಗಾಗುವವರೆಗೂ, ಯಾರ ಬೀದಿಯ ಜಗಲಿಯಲ್ಲಿಯೋ ಕಾಲಕ್ಷೇಪಮಾಡಿ, ಉಷಃಕಾಲದಲ್ಲಿ ಸ್ವಲ್ಪ ಧೈರ್ಯ ತಂದುಕೊಂಡು, ಮತ್ತೆ ಗುಡ್ಡದ ಗುಹೆಯ ಹತ್ತಿರಕ್ಕೆ ಹೋದನು,

"ಬಂದೆಯಾ? ನಿನ್ನ ಮೇಕೆ ಕೊಬ್ಬಿ ತುಂಬಾ ರುಚಿಯಾಗಿತ್ತು! ತಕ್ಕೋ ಅದರ ಬೆಲೆ!" ಎಂಬ ಗೊಗ್ಗರ ಕಂಠದ ಮಾತೂ, ಅದರ ಹಿಂದೆಯೇ ಈಸಣ್ಣನ ಕಾಲ ಹತ್ತಿರ ಒಂದು ಹಣದ ಚೀಲವೂ ಗುಹೆಯೊಳಗಿನಿಂದ ಬಿಂದು ಬಿತ್ತು. ಅದನ್ನು ಎತ್ತಿ ಕೊಂಡು ಓಡುತ್ತಾ ನಡೆಯುತ್ತಾ ಮನೆಗೆ ಮುಟ್ಟಿದ ಮೇಲೆ ಉಸಿರುಬಿಟ್ಟ ಈಸಣ್ಣನಾಯಕ.

ಮನೆಯೊಳಗೆ ಹೊಕ್ಕು ಬಾಗಿಲು ಮುಚ್ಚಿ ಚೀಲ ದಲ್ಲಿದ್ದ ಹಣವನ್ನೆಲ್ಲಾ ನೆಲದ ಮೇಲೆ ಸುರಿದು ಎಣಿಸಿ ನೋಡಿದನು. ಐವತ್ತು ರೂಪಾಯಿಗಳಿದ್ದುವು! "ಆ ಸೊರಕಲು ಮೇಕೆಗೆ ಇಷ್ಟೊಂದು ಬೆಲೆ ಕೊಟ್ಟ ಹುಚ್ಚು ಮಂಕ ಯಾರಪ್ಪಾ!" ಎಂದು ಅವನ ಹೆಂಡತಿ ಕಣ್ಣುಬಾಯಿ ಅಗಲಿಸಿ ಕೇಳಿದಳು.

"ಈ ಸಂಗತಿ ಯಾರಿಗೂ ಹೇಳಿಬಿಡಬೇಡ ಮತ್ತೆ!" ಎಂದು ಈಸಣ್ಣ ನಾಯಕ ನಡೆದ ಸಂಗತಿಯನ್ನೆಲ್ಲಾ ಹೆಂಡತಿಗೆ ಹೇಳಿಬಿಟ್ಟನು.

ಈಸಣ್ಣನ ಹೆಂಡತಿ ಕೂಡಾ "ಈ ಸಂಗತಿ ಯಾರಿಗೂ ಹೇಳಕೂಡದು ಮತ್ತೆ!" ಎನ್ನುತ್ತ ಆ ವಿಷಯನ್ನು ನೆರೆಮನೆ ಪಾರಮ್ಮನ ಹತ್ತಿರ ಹೇಳಿದಳು. ಅವಳು ತನ್ನ ಗಂಡನಿಗೆ ಹೇಳಿದಳು. ಅವನು ಇದಿರು ಮನೆಯವನೊಂದಿಗೂ, ಹಿಂದಿನ ಮನೆಯವನೊಂದಿಗೂ ಹೇಳಿ, ಕಡೆಗೆ ಈ ಸಂಗತಿ ಊರಿಗೆಲ್ಲಾ ತಿಳಿದುಹೋಯಿತು.

ಮೇಕೆಗಳನ್ನು ಇಟ್ಟುಕೊಂಡವರಿಗೆ ಪರಮಾನಂದ ವಾಯಿತು. ಮೇಕೆಗಳು ಇಲ್ಲದ ಕೆಲವರು ಓಡೋಡಿ

ಹೋಗಿ ಮೇಕೆಗಳನ್ನು ಕೊಂಡುಕೊಂಡರು. ಕತ್ತಲಾದ ಕೂಡಲೇ ಅನೇಕಮಂದಿ ಆ ಪಿಶಾಚಿಯ ಗುಹೆಯೊಳಗೆ ತಮ್ಮ ತಮ್ಮ ಮೇಕೆಗಳನ್ನು ತೂರಿಸಿ ಹಿಂದಿರುಗಿ ಹೋದರು. ಈಸಣ್ಣ ಕೂಡಾ ಹೆಂಡತಿಯ ಒತ್ತಾಯ ದಿಂದ ಮತ್ತೆ ಎರಡು ಮೇಕೆಗಳನ್ನು ಒಯ್ದು ಗುಹೆ ಯೊಳಗೆ ಬಿಟ್ಟು ಮನೆಗೆ ಬಂದನು.

ಮತ್ತೆ ಬೆಳಬೆಳಗಾಗುವುದರೊಳಗೆ ಪಿಶಾಚಿ ಕೊಡುವ ಮೇಕೆಯ ಬೆಲೆಯನ್ನು ತಂದುಕೊಳ್ಳ ಲಿಕ್ಕಾಗಿ ಇಪ್ಪತ್ತೈದು ಜನರು ಗುಹೆಯ ಹೊರಗೆ ಕಾದು ನಿಂತರು. ಅವರಲ್ಲಿ ಈಸಣ್ಣ ನಾಯಕನೂ ಇದ್ದ. ಆದರೆ ಯಾರಿಗೂ ಗುಹೆಯೊಳಗಿನಿಂದ ಹಣ ಬಂದು ಬೀಳಲಿಲ್ಲ.

ಬೆಳ್ಳಗೆ ಬೆಳಗಾಗಿ ಹೋಯಿತು. ಕಡೆಗೆ ಎಲ್ಲರೂ ಪರಸ್ಪರ ಧೈರ್ಯ ಮಾಡಿಕೊಂಡು ಗುಹೆಯೊಳಗೆ ಹೋದರು. ಗುಹೆಯೊಳಗೆ ಒಂದೇ ಒಂದು ಮೇಕೆಯೂ ಕಾಣಲಿಲ್ಲ. ವಿಸ್ತಾರವಾದ ಆ ಗುಹೆ ಯೊಳಗಿನ ಒಂದು ಬಂಡೆ ಕಲ್ಲಿನ ಮೇಲೆ ಒಂದು ಕಾಗದ ವಿರುವುದನ್ನು ನೋಡಿದರು. ಅದರ ಮೇಲೊಂದು ಚಿಕ್ಕ ಕಲ್ಲನ್ನು ಭಾರವಿಡಲಾಗಿತ್ತು. ಒಬ್ಬನು ಆ ಕಾಗದ ವನ್ನೆತ್ತಿ ಈ ರೀತಿಯಾಗಿ ಓದಿದನು :

"ಈ ಕಾಗದ ಬರೆಯುವುದು ದೆವ್ವವಲ್ಲ ಪಿಶಾಚಿ ಯಲ್ಲ, ನಿಮ್ಮಂಥ ಮನುಷ್ಯನೇ! ಏನಾದರೂ ಕೆಲಸ ಕೊಡಿರೆಂದು ನಿಮ್ಮ ಸುತ್ತಲೂ ತಿರುಗಿದ ಶೇಷಪ್ಪನೇ ನಾನು. ನನಗೆ ತಂದೆಯಿಲ್ಲ. ಮನೆಯಲ್ಲಿದ್ದುದೆಲ್ಲಾ ಕೂಡಿ ಕೇವಲ ನೂರು ರೂಪಾಯಿ ಮಾತ್ರ. ಅದನ್ನು ತೆಗೆದುಕೊಂಡು ನಿಮ್ಮ ಊರಿಗೆ ಬಂದೆ. ಕೆಲಸ ಕೇಳಿದರೆ, ಹೊಸಬನಾದ ನಿನ್ನನ್ನು ನಂಬಿ ಹೇಗೆ ಕೆಲಸ ಕೊಡುವುದು? ಅಂತ ನೀವೆಲ್ಲಾ ಹೇಳಿದಿರಿ. ಇನ್ನೊಂದು ಊರಿಗೆ ಹೋಗೋಣ, ಅಥವಾ ಈ ಗುಹೆಯಲ್ಲಿರುವ ದೆವ್ವದ ಹೊಟ್ಟೆಗೆ ಸೇರೋಣ ಅಂದುಕೊಂಡು ಈ ಗುಹೆಯೊಳಗೆ ರಾತ್ರಿ ಮಲಗಲು ಹೊಕ್ಕೆ. ದೆವ್ವ ಗಿವ್ವ ಏನೂ ಇಲ್ಲ. ಮಾರನೇದಿನ ರಾತ್ರಿಯಾಗುವಾಗ ಮೇಕೆಯನ್ನು ಎಳೆದುಕೊಂಡು ಬರುವವನನ್ನು ನೋಡಿ ಇದೊಂದು ಉಪಾಯ ಹೊಳೆಯಿತು. ಮನುಷ್ಯನನ್ನು ನಂಬದಿರುವ ನೀವು ದೆವ್ವ ಪಿಶಾಚಿಗಳನ್ನು ನಂಬಿದಿರಿ. ಇಲ್ಲದ ಪಿಶಾಚಿ ನನಗೆಷ್ಟೋ ಒಳ್ಳೇದು ಮಾಡಿತು. ತುಂಬಾ ಲಾಭ ಬರುವುದೆಂಬ ಆಶೆಯಲ್ಲಿ ನೀವೆಲ್ಲಾ ಗುಂಪು ಗುಂಪಾಗಿ ಕೆಲಸಮಾಡಿದಿರಿ. ನಿಮ್ಮ ಮೇಕೆಗಳನ್ನು ಮಾರಿದ ಹಣದಿಂದ ಎಲ್ಲಿಯಾದರೂ ವ್ಯಾಪಾರ ಪ್ರಾರಂಭಿಸಿ ಇನ್ನೊಂದು ವರ್ಷದೊಳಗೆ ನಿಮ್ಮ ಋಣ ತೀರಿಸುತ್ತೇ ನೆಂಬ ನಂಬುಗೆ ನನಗಿದೆ. ನಾನು ವೃತ್ತಿ ಚೋರನಲ್ಲ. ತಾಳ್ಮೆಯಿಂದಿರಿ". ಈ ಕಾಗದದ ಸಂಗತಿ ತಿಳಿದು ಎಲ್ಲರಿಗೂ ಬೆಪ್ಪು ಬಡೆಯಿತು!



# ಸಹಿ ಮಾಡಿದ ಕಳ್ಳ

**ಸೂ**ರ್ಯಪುರಿ ಮತ್ತು ಚಂದ್ರಪುರಿಗಳ ನಡುವಿನ ಅರಣ್ಯದಲ್ಲಿ ದೋರ್ದಂಡನೆಂಬ ಕಳ್ಳನು ಸ್ವೈರ ವಿಹಾರ ಮಾಡುತ್ತಿದ್ದ. ಅವನ ಕಡೆಯ ಕಳ್ಳರು ಎರಡು ದೇಶಗಳ ರಾಜಾಸ್ಥಾನಗಳಲ್ಲಿಯೂ ಇರುವರೆಂದು ಪ್ರತೀತಿಯಿತ್ತು.

ಒಂದುಸಾರಿ ಚಂದ್ರಗಿರಿಯ ರಾಜನು ಸೂರ್ಯಪುರಿಯ ರಾಜನ ಹತ್ತಿರ ಲಕ್ಷ ಬಂಗಾರದ ಮೊಹರಿಗಳು ಸಾಲಬೇಕೆಂದು ಕೇಳಿದನು. ಸೂರ್ಯಪುರಿ ರಾಜನು ಕೊಡಲು ಒಪ್ಪಿದ್ದೂ ಆಯಿತು. ಮರುದಿನ ಚಂದ್ರಗಿರಿಯ ಕೋಶಾಧಿಕಾರಿ ಹಣವನ್ನು ತೆಗೆದುಕೊಂಡು ಬರಲು ಸೂರ್ಯಪುರಿಗೆ ಪ್ರಯಾಣ ಹೊರಡುತ್ತಾನೆಂದು, ಮುಂಚಿನ ದಿನವೇ ದೋರ್ದಂಡ ಕಳ್ಳನಿಗೆ ಗೊತ್ತಾಯಿತು.

ಕೂಡಲೇ ದೋರ್ದಂಡನು ಚಂದ್ರಗಿರಿಯ ಗುರುಕುಲಕ್ಕೆ ಹೋಗಿ, ರಾತ್ರಿಯ ಹೊತ್ತಿನಲ್ಲಿ ಗುರುವನ್ನು ಎಬ್ಬಿಸಿ, ತನಗೆ ಕೋಶಾಧಿಕಾರಿಯ ಹಾಗೆ ಸಹಿಮಾಡಲು ಕಲಿಸದೆ ಹೋದರೆ ಕೊಂದುಬಿಡುವೆನೆಂದು ಹೆದರಿಸಿದನು. ಗುರು ಅವನಿಗೆ ಕೋಶಾಧಿಕಾರಿಯ ಹೆಸರು ಬರೆಯುವ ಕ್ರಮವನ್ನು ಅಭ್ಯಾಸಮಾಡಿಸಿದನು.

ಮರುದಿನ ಚಂದ್ರಗಿರಿಯ ಕೋಶಾಧಿಕಾರಿ ಸೈನಿಕದಳದೊಂದಿಗೆ ಅರಣ್ಯ ಮಾರ್ಗದಲ್ಲಿ ಹೋಗುವಾಗ ದೋರ್ದಂಡನು ಗುಂಪಿನೊಂದಿಗೆ ಅಟಕಾಯಿಸಿದನು. ಕೋಶಾಧಿಕಾರಿಯ ಹತ್ತಿರ ರಾಜಮುದ್ರಿಕೆ ಇರುವ ಪತ್ರ ವಿದ್ದಿತು. ಅದರಲ್ಲಿ ರಾಜನು ಸಾಲ ಕೇಳುವ ಮಾತುಗಳೂ ಇದ್ದುವು.

ದೋರ್ದಂಡನು ಕೋಶಾಧಿಕಾರಿಯನ್ನೂ ಸೈನಿಕರನ್ನೂ ಬಂಧಿಸಿ, ಕೋಶಾಧಿಕಾರಿಯ ದುಸ್ತುಗಳನ್ನು ತಾನು ಧರಿಸಿ, ಸೈನಿಕರ ದುಸ್ತುಗಳನ್ನು ತನ್ನ ಅನುಚರರು ಧರಿಸುವಂತೆ ಮಾಡಿ, ಸೂರ್ಯಪುರದ ಆಸ್ಥಾನಕ್ಕೆ ಹೋದನು. ಚಂದ್ರಗಿರಿರಾಜನ ಬೇಡಿಕೆಯ ಪತ್ರ ನೋಡಿದ ಕೂಡಲೇ ಸೂರ್ಯಪುರಿ ರಾಜನು ಲಕ್ಷ ಮೊಹರಿಗಳನ್ನು ಎಣಿಸಿ ಕೊಟ್ಟು, ಹಣ ಮುಟ್ಟಿದಂತೆ ದೋರ್ದಂಡನಿಂದ ಸಹಿಮಾಡಿಸಿಕೊಂಡನು.

ದೋರ್ದಂಡನು ತಾನು ಗುರುಕುಲದಲ್ಲಿ ಕಲಿತ ಸಹಿಮಾಡಿ, ಕೂಡಲೇ ಸೂರ್ಯಪುರಿ ರಾಜನಿಂದ ಬಂಧಿಸಲ್ಪಟ್ಟು, ಸೆರೆ ಮನೆಗೆ ಹೋದನು. ಏಕೆಂದರೆ ಅವನು ಮಾಡಿದ ಸಹಿ ಅವನ ಹೆಸರೇ! ಅದನ್ನೇ ಕಲಿಸಿದ್ದನು ಗುರು.






# ಬದುಕುವದಾರಿ

ಬಹಳ ಕಾಲದ ಹಿಂದೆ ಒಂದು ನಗರದಲ್ಲಿ ಒಬ್ಬ ವಿದ್ಯಾವಂತನು ವಾಸವಾಗಿದ್ದನು. ಅವನು ಆಗರ್ಭ ದರಿದ್ರನು. ಆದುದರಿಂದ ಅವನು ಹೇಗಾದರೂ ಮಹಾರಾಜರ ಆಸ್ಥಾನದಲ್ಲಿ ಚಿಕ್ಕದೊಂದು ಉದ್ಯೋಗ ಸಂಪಾದಿಸಿಕೊಳ್ಳುವ ಉದ್ದೇಶದಲ್ಲಿದ್ದನು. ಅವನು ಎಷ್ಟೇ ಪ್ರಯತ್ನಮಾಡಿದರೂ ರಾಜನ ದರ್ಶನ ಮಾಡಲು ಸಾಧ್ಯವಾಗಲಿಲ್ಲ. ಅದು ಹೋಗಲೆಂದು ನೋಡಿದರೆ, ಆಸ್ಥಾನದಲ್ಲಿ ಕೆಲಸಮಾಡುವ ಉದ್ಯೋಗಸ್ಥರ ಆಶ್ರಯ ಕೂಡಾ ಅವನಿಗೆ ಸಿಗಲಿಲ್ಲ.

ಆದರೆ ಅವನು ನಿರಾಶನಾಗಲಿಲ್ಲ. ತಾನು ಹೇಗಾದರೂ ಬದುಕಲೇ ಬೇಕೆಂದು ಪಟ್ಟು ಹಿಡಿದನು. ಹೊಟ್ಟೇ ಪಾಡಿಗೆ ಎಷ್ಟೋ ವೇಷಗಳಿವೆಯಂತೆ! ಅವುಗಳಲ್ಲಿ ಯಾವುದಾದರೊಂದು ತನಗೆ ಸಿಗಲಾರದೇ? ಹೀಗೆಂದುಕೊಂಡು ಅವನು ಎಲ್ಲೆಲ್ಲೋ ತಿರುಗುತ್ತಾ ಹುಡುಕುತ್ತಿದ್ದನು.

ಆಗ ಊರಿಗೆ ದೂರವಾಗಿಯೂ, ಕಾಡಿಗೆ ಹತ್ತಿರವಾಗಿಯೂ ಎರಡು ಸಮಾಧಿಗಳಿರುವುದನ್ನು ನೋಡಿದನು. ಅವುಗಳ ಸುತ್ತಲೂ ಹುತ್ತಗಳೂ ಹೊದರುಗಳೂ ಬೆಳೆದು ಹೋಗಿದ್ದುವು. ಆ ಸಮಾಧಿಗಳನ್ನು ನೋಡಿದ ಕೂಡಲೇ ವಿದ್ಯಾವಂತನಿಗೆ ಒಂದು ಆಲೋಚನೆ ಬಂತು. ಅವನು ಸೊಂಟ ಬಗ್ಗಿಸಿ ಕಷ್ಟಪಟ್ಟು ಸಮಾಧಿಗಳ ಸುತ್ತಲೂ ಬೆಳೆದಿದ್ದ ಪೊದೆಗಳನ್ನು ಕಡಿದು ಸುತ್ತಲಿನ ಪ್ರದೇಶವನ್ನು ಶುಭ್ರಗೊಳಿಸಿ, ಸಮೀಪದ ಕುಂಟೆಯಿಂದ ನೀರು ತಂದು ಚೆಲ್ಲಿ, ರಂಗೋಲೆ ಹಾಕಿ ಸಮಾಧಿಗಳಲ್ಲಿ ತುಲಸಿ ಗಿಡಗಳನ್ನು ನೆಟ್ಟನು. ದಿನಾ ಸಮಾಧಿಗಳನ್ನು ಪುಷ್ಪಗಳಿಂದ ಅಲಂಕರಿಸಿ ಪೂಜೆ, ನಮಸ್ಕಾರ, ಧ್ಯಾನ ಮೊದಲಾದುವುಗಳಿಗೆ ತೊಡಗಿದನು.

ಊರಿನ ಪ್ರಜೆಗಳು ದೇವಾಲಯಕ್ಕೆ ಹೋಗಿ ಬರುವ ದಾರಿಯಾಗಿತ್ತು, ಅದು. ಆಗಾಗ ಅರಣ್ಯ ಮಾರ್ಗದಲ್ಲಿ ಆಚೆಯ ಈಚೆಯ ಊರುಗಳಿಗೆ ಹೋಗಿ ಬರುವ ದಾರಿಯೂ ಅದಾಗಿತ್ತು. ಅಂಥವರು ವಿದ್ಯಾವಂತನ ಕೆಲಸವನ್ನು ನೋಡಿ ಆಶ್ಚರ್ಯ ಪಡುತ್ತ ಸ್ವಲ್ಪ ಹೊತ್ತು ನಿಂತು ಹೋಗುತ್ತಿದ್ದರು. ಸಮಾಧಿಗಳ ಪಕ್ಕದಲ್ಲೇ ವಿದ್ಯಾವಂತನು ಒಂದು ಕುಟೀರವನ್ನೂ ಕಟ್ಟಿಕೊಂಡು ಅದರಲ್ಲಿ ಮಂತ್ರ ಓದುತ್ತಾ ಇರುತ್ತಿದ್ದನು. ಕೆಲವರು ಅವನ ಹತ್ತಿರ ಆ ಸಮಾಧಿಗಳ ವಿವರವೇನೆಂದು ಕೇಳಿದರು.

**ಎಸ್. ಕೃಷ್ಣವೇಣಿ**



"ಇವು ಮಹಾರಾಜರ ಪೂರ್ವಿಕರ ಸಮಾಧಿ. ತುಂಬಾ ಶಿಥಿಲಾವಸ್ಥೆಯಿಂದಿರುವ ಇವುಗಳನ್ನು ನೋಡಿ, ರಾಜವಂಶದ ಮೇಲಿನ ಗೌರವದಿಂದ ಪುನರುದ್ಧರಣ ಮಾಡಿ ಪೋಷಿಸಿಕೊಂಡಿದ್ದೇನೆ. ಇವುಗಳಿಗೆ ಪೂಜಾ ನಮಸ್ಕಾರಮಾಡಿದರೆ ಮನೆತನಕ್ಕೆ ಒಳ್ಳೇದಾಗುವುದೆಂದು ನಮ್ಮ ತಾತ ಹೇಳಿದ್ದರು." ಎಂದನು ವಿದ್ಯಾವಂತ.

ಅವನ ಮಾತುಗಳನ್ನು ಪ್ರಜೆಗಳು ನಂಬಿದರು. ಏಕೆಂದರೆ ಸಮಾಧಿಗಳು ಪುಣ್ಯಸ್ಥಳದ ಹಾಗೆ ಕಂಗೊಳಿಸುತ್ತಿದ್ದುವು. ಅವುಗಳ ಮೇಲೆ ತುಲಸೀ ಗಿಡಗಳಿವೆ. ದೀಪಾರಾಧನೆಗಳು ನಡೆಯುತ್ತಿವೆ. ಅವು ರಾಜವಂಶದವರದು ಅಲ್ಲದಿದ್ದರೆ, ಮನೆತನಕ್ಕೆ ಒಳಿತಾಗದಿದ್ದರೆ ಈ ಮನುಷ್ಯನು ಇಷ್ಟೊಂದು ಭಕ್ತಿ ಶ್ರದ್ಧೆಗಳಿಂದ ಸೇವೆಮಾಡುವನೇ? ಅಲ್ಲಿ ಸಮಾಧಿಗೊಂಡ ರಾಜರು ಎಂತಹ ಯಜ್ಞದಾನ ಧರ್ಮಗಳನ್ನು ಮಾಡಿದ ಪುಣ್ಯಾತ್ಮರೋ!

ಇದರಿಂದ ಪ್ರಜೆಗಳು ಆ ಸಮಾಧಿಗಳ ಮೇಲೆ ಶ್ರದ್ಧಾಸಕ್ತಿಗಳನ್ನು ತೋರಿಸುತ್ತ, ದೇವಾಲಯಕ್ಕೆ ಬರುವ ಹಾಗೆ ಬಂದು, ಸಮಾಧಿಗಳ ಆರಾಧನೆಗೆ ಬೇಕಾದ ಪದಾರ್ಥಗಳನ್ನೂ ಎಣ್ಣೆಯನ್ನೂ, ಹಣವನ್ನೂ ಕೊಡ ತೊಡಗಿದರು. ಸಮಾಧಿಗಳಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತ, ತಮ್ಮ ಕೋರಿಕೆಗಳನ್ನು ನಿವೇದಿಸಿ ಪ್ರಾರ್ಥಿಸಲಿಕ್ಕೂ ತೊಡಗಿದರು.

ಸಮಾಧಿಗಳ ಮುಂದೆ ಸಾಷ್ಟಾಂಗ ಅಡ್ಡ ಬಿದ್ದು ಪ್ರಾರ್ಥಿಸಿಕೊಂಡರೆ, ನೆನೆದ ಕೋರಿಕೆ ನೆರವೇರುವುದೆಂದೂ ವಿದ್ಯಾವಂತನು ಮೆಲ್ಲಗೆ ಹೇಳಿ ಪ್ರಚಾರಕ್ಕೆ ಬಿಟ್ಟನು. ಇದರಿಂದ ಆ ಸ್ಥಳವು ದೊಡ್ಡ ಯಾತ್ರಾಸ್ಥಳವೇ ಆಯಿತು. ವಿದ್ಯಾವಂತನಿಗೆ ಸಾಕಷ್ಟು ಆದಾಯವೂ ಆಯಿತು.

ಈ ಸಮಾಚಾರವು ಕ್ರಮವಾಗಿ ರಾಜನ ಕಿವಿಯವರೆಗೂ ಹೋಯಿತು. ಆ ಸಮಾಧಿಗಳು ನಿಜಕ್ಕೂ ರಾಜವಂಶಕ್ಕೆ ಸೇರಿದುವೋ, ಅಲ್ಲವೋ? ರಾಜವಂಶಕ್ಕೆ ಸೇರಿದುವೇ ಆದರೆ ಇಷ್ಟು ಕಾಲ ಹೇಗೆ ಮರೆಯಲ್ಲಿ ಬಿದ್ದುವು ? ಇದನ್ನೆಲ್ಲಾ ವಿಚಾರಿಸಿ ನೋಡುವಂತೆ ರಾಜನು ಮಂತ್ರಿಗೆ ಅಜ್ಞೆಮಾಡಿದನು.

ಮಂತ್ರಿ ಸಮಾಧಿಗಳನ್ನು ಪರೀಕ್ಷಿಸಿ ಪರಿಶೀಲನೆ ನಡೆಸುವಂತೆ ಸಂಶೋಧಕರನ್ನು ಕಳುಹಿಸಿದನು. ಅವರು ಬಂದು, ಸಮಾಧಿಗಳ ಮೇಲೆ ಎರಡು ಹೆಸರುಗಳು ಕೆತ್ತಲ್ಪಟ್ಟಿರುವುದನ್ನು ಕಂಡುಹಿಡಿದರು. ಅಷ್ಟೇ ಅಲ್ಲದೆ ಕೆಲವು ಚಿಹ್ನೆಗಳಿರುವುದನ್ನೂ ನೋಡಿದರು.

ಅಷ್ಟುಮಾತ್ರ ವಿವರಗಳಿಂದ ಯಾವುದೂ ಗೊತ್ತಾಗಲಿಲ್ಲ. ರಾಜನು ತನ್ನ ವಂಶವೃಕ್ಷದ ವಿವರಗಳನ್ನು ತೆಗೆಯಿಸಿ ಪರಿಶೀಲನೆ ನಡೆಸಿದಾಗ, ಆ ಸಮಾಧಿಗಳ ಮೇಲಿರುವ ಹೆಸರಿನ ಪತಿ ಪತ್ನಿಯರು ತಮ್ಮ ಹಿಂದಿನ ಹದಿನಾಲ್ಕನೇ ತಲೆ ಮಾರಿನವರಾಗಿ ರಾಜ್ಯಪಾಲನೆಮಾಡಿದರೆಂಬ ಸಂಗತಿ ಗೊತ್ತಾಯಿತು.

ಸಮಾಧಿಗಳ ಮೇಲಿರುವ ಚಿಹ್ನೆಗಳು ಆ ಕಾಲದ ರಾಜ ವಂಶದ ಚಿಹ್ನೆಗಳೇ! ಅನುಮಾನ ತೀರಿ ಹೋಯಿತು!

"ಹೀಗೆ ಮರೆಯಾದ ನಮ್ಮ ವಂಶದ ಗೌರವ ವನ್ನು ತನ್ನ ಸ್ವಂತ ಶಕ್ತಿಯಿಂದ ಪುನರುದ್ಧಾರಮಾಡಿದ ಆ ಮನುಷ್ಯನಿಗೆ ಏನು ಕೊಟ್ಟರೂ ಸಾಲದು." ಎಂದು ರಾಜನು ವಿದ್ಯಾವಂತನನ್ನು ತನ್ನ ಬಳಿಗೆ ಕರೆಯಿಸಿ, "ಆ ಸಮಾಧಿಗಳು ರಾಜವಂಶದುವೆಂದು ಯಾವ ಆಧಾರದಿಂದ ಕಂಡುಹಿಡಿದೆ?" ಎಂದು ಆಸಕ್ತಿಯಿಂದ ಕೇಳಿದನು.

"ಮಹಾಪ್ರಭುಗಳೇ, ನಾನು ಯಾವುದನ್ನೂ ಕಂಡು ಹಿಡಿದವನಲ್ಲ. ತಮ್ಮ ದರ್ಶನಕ್ಕಾಗಿ ತುಂಬಾ ಪ್ರಯತ್ನಪಟ್ಟು ಸಾಧ್ಯವಾಗದೆ, ಕಣ್ಣಿಗೆ ಬಿದ್ದ ಸಮಾಧಿ ಗಳನ್ನು ಬದುಕುವ ದಾರಿಯಾಗಿ ಉಪಯೋಗಿಸಿ ಕೊಂಡೆ, ಅಷ್ಟೇ. ನನ್ನ ಈ ಮೋಸವು ತಮ್ಮ ಸನ್ನಿಧಿಯವರೆಗೂ ಬಂದೀತು ಎಂದು ಆಲೋಚಿಸ ಲಿಲ್ಲ. ನನ್ನನ್ನು ಕ್ಷಮಿಸಿಬಿಡಿರಿ ಪ್ರಭೂ! ಬದುಕಲು ಬೇರೆ ದಾರಿ ಯಾವುದಾದರೂ ಹುಡುಕಿಕೊಳ್ಳುತ್ತೇನೆ. ನಾನು ಆಗರ್ಭ ದರಿದ್ರನು. ನನಗೆ ವಿದ್ಯೆ ಮಾತ್ರ ಅಂಟಿಕೊಂಡಿದೆಯಾದರೂ ಹಣ ಮಾತ್ರ ಹತ್ತಿರ ಬರಲಿಲ್ಲ. ಇನ್ನು ಹೀಗೆ ಮಾಡಲಾರೆ" ಎಂದನು ವಿದ್ಯಾವಂತ. "ನೀನು ಒಳ್ಳೆಯ ಕೆಲಸವನ್ನೇ ಮಾಡಿದೆ. ಯಾರನ್ನೂ ಮೋಸಪಡಿಸಲಿಲ್ಲ. ಅವು ರಾಜವಂಶ ದವರ ಸಮಾಧಿಗಳೇ. ಮಧ್ಯ ಕಾಲದಲ್ಲಿ ನಮ್ಮ ವಂತ ಬಾಂಧವರೊಳಗೆ ದೀರ್ಘಕಾಲದ ಮನಸ್ತಾಪ ದಿಂದಾಗಿ, ಆ ಸಮಾಧಿಗಳ ವಿಷಯ ಪೂರ್ತಿ ಮರೆಯಾಗಿ ಹೋಯಿತು. ತಿಳಿದೋ ತಿಳಿಯದೆಯೋ ನೀನು ಅವುಗಳನ್ನು ಪುನರುದ್ಧಾರಮಾಡಿ ಪುಣ್ಯ ಕಟ್ಟಿ ಕೊಂಡೆ. ನಮಗೆ ಒಳಿತೇ ಮಾಡಿದೆ. ನೀನು ಮೊದಲು ನಮ್ಮ ದರ್ಶನಮಾಡಲು ಬಂದೆನೆಂದೆಯಲ್ಲಾ? ಏತಕ್ಕೆ ನಮ್ಮ ದರ್ಶನಮಾಡಲು ಬಯಸಿದೆ? ನಿನಗೆ ನಮ್ಮಿಂದ ಏನಾದರೂ ಆಗಬೇಕಾಗಿತ್ತೆ?" ಎಂದು ರಾಜನು ಕೇಳಿದನು.

"ಹೇಳಿದೆನಲ್ಲ ಪ್ರಭುಗಳೇ? ನಾನೊಬ್ಬ ಕಡು ಬಡವ. ಆದರೂ ಕಲಿತುಕೊಂಡ ವಿದ್ಯೆಗೆ ತಮ್ಮ ಆಸ್ಥಾನದಲ್ಲಿ ಒಂದು ಚಿಕ್ಕ ಉದ್ಯೋಗ ಸಿಗುವು ದೇನೋ ಕೇಳಿ ನೋಡಲು ಆಶೆಪಟ್ಟೆ. ನನ್ನ ಆಶೆ ತೀರಲಿಲ್ಲ" ಎಂದ ವಿದ್ಯಾವಂತ.

"ಇನ್ನು ಖಂಡಿತಾ ನಿನ್ನ ಆಶೆ ತೀರುತ್ತದೆ. ನಿನಗೆ ಒಳ್ಳೆಯ ಉದ್ಯೋಗದೊಂದಿಗೆ ಮಾನ್ಯವನ್ನೂ ಕೊಡಿಸುತ್ತೇನೆ. ಇನ್ನು ಆ ಪ್ರಾಂತವೆಲ್ಲಾ ನಿನ್ನದೇ ಆಗಿರುತ್ತದೆ" ಎಂದನು ರಾಜ.

ಹೀಗೆ ಕಾಕತಾಳೀಯವಾಗಿ ಆ ವಿದ್ಯಾವಂತನು ತನ್ನ ಉದರ ಪೋಷಣೆ ನೋಡಿಕೊಳ್ಳುವ ಪ್ರಯತ್ನದಲ್ಲಿ, ರಾಜವಂಶಕ್ಕೆ ಒಳಿತುಮಾಡಿ, ಪ್ರಸಿದ್ಧಿಗೆ ಬಂದನು.



# ಅತ್ಯಾಶೆ

ಒಂದು ದಿನ ಗುರುಶೆಟ್ಟರು ಸಂತೆಗೆ ಹೊರಟಾಗ, ಕೂಲಿ ಕೆಲಸಮಾಡಿ ಬದುಕುವ ರಂಗಪ್ಪನು ಇದಿರಾಗಿ ಬಂದನು. ಆದುದರಿಂದಲೇ ಆ ದಿನ ಸಂತೆಯಲ್ಲಿ ಒಳ್ಳೆಯ ಲಾಭವಾಯಿತೆಂದು ಗುರುಶೆಟ್ಟರಿಗೆ ತೋರಿತು. ಅಂತಲೇ ಅವರು ರಂಗಪ್ಪನನ್ನು ತನ್ನ ಬಳಿಗೆ ಕರೆಯಿಸಿ, ಅವನಿಗೆ ಆ ಸಂಗತಿ ಹೇಳಿ ಎಂಟಾಣೆ ಬಹುಮಾನವಿತ್ತರು.

ಈ ಸಂಗತಿ ತಿಳಿದು ರಂಗಪ್ಪನು ದಿನಾ ಗುರುಶೆಟ್ಟರಿಗೆ ಇದಿರಾಗಿ ಬರತೊಡಗಿದನು. ಗುರುಶೆಟ್ಟರಿಗೆ ದಿನಾ ಅಷ್ಟೋ ಇಷ್ಟೋ ಲಾಭ ಬರುತ್ತಲೇ ಇದ್ದುದರಿಂದ ರಂಗಪ್ಪನಿಗೂ ಸ್ವಲ್ಪ ಚಿಲ್ಲರೆ ಬಹುಮಾನ ತಮಗ್ಗೆ ತೋಚಿದಷ್ಟು ಕೊಡುತ್ತಲೂ ಬಂದರು.

ನಿಜವಾಗಿಯೂ ಗುರುಶೆಟ್ಟರು ತನ್ನ ಮೂಲಕವಾಗಿ ಲಾಭಗಳಿಸುತ್ತಾರೆಂದುಕೊಂಡು ರಂಗಪ್ಪನಿಗೆ ದುರಾಶೆ ಹುಟ್ಟಿತು. ಒಂದು ದಿನ ಬೆಳಿಗ್ಗೆ ಅವನು ಗುರುಶೆಟ್ಟರಿಗೆ ಇದಿರಾಗಿ ಬರಲಿಲ್ಲ. ಆ ದಿನ ಗುರುಶೆಟ್ಟರಿಗೆ ಲಾಭವೂ ತೃಪ್ತಿಕರವಾಗಿ ಬರಲಿಲ್ಲ.

"ಈ ದಿನ ಯಾಕೋ ಇದಿರಾಗಿ ಬರಲಿಲ್ಲ ?" ಎಂದು ಗುರುಶೆಟ್ಟರು ರಂಗಪ್ಪನನ್ನು ಕೇಳಿದರು.

"ನನ್ನಿಂದ ನೀವು ದಿನಾ ಲಾಭ ಹೊಂದುತ್ತೀರಲ್ಲ ? ನಿಮ್ಮ ಲಾಭದಲ್ಲಿ ಅರ್ಧಪಾಲು ಕೊಡುತ್ತೇನೆಂದು ಪಟೇಲರ ಮುಂದೆ ಒಪ್ಪಂದಮಾಡಿಕೊಟ್ಟರೇನೇ ಇದಿರು ಬರುತ್ತೇನೆ" ಎಂದ ರಂಗಪ್ಪ.

ಗುರು ಶೆಟ್ಟರು ಹಾಗೆ ಒಪ್ಪಂದಮಾಡಿ ಕೊಟ್ಟರು.

ಒಂದು ದಿನ ಅಕಸ್ಮಾತ್ತಾಗಿ ಮಳೆ ಬಂದು ಗುರುಶೆಟ್ಟರ ಸರಕೆಲ್ಲಾ ನೆನೆದು ತುಂಬಾ ನಷ್ಟವಾಯಿತು. ಗುರುಶೆಟ್ಟರು ಪಟೇಲರ ಬಳಿಗೆ ಹೋಗಿ, ತನಗೆ ನಷ್ಟ ಬಂದ ಸಂಗತಿ ಹೇಳಿ, ಅದರಲ್ಲಿ ಅರ್ಧಭಾಗವನ್ನು ರಂಗಪ್ಪನಿಂದ ಕೊಡಿಸಬೇಕೆಂದು ಕೇಳಿದರು. ವಿಧಿಯಿಲ್ಲದೆ ರಂಗಪ್ಪನು ಕೊಡಲೇ ಬೇಕಾಯಿತು!





# ದೂರದ ಬೆಟ್ಟ

ಒಂದು ಊರಿನಲ್ಲಿ ಸೋಮಪ್ಪನೆಂಬ ದೊಡ್ಡ ಬೇಸಾಯಗಾರನಿದ್ದ. ಅವನ ಮನೆಯ ಅಂಗಳಕ್ಕೆ ಗಾಡಿಗಳಲ್ಲಿ ಧಾನ್ಯವು ಬಂದು ರಾಶಿ ಬೀಳುತಿತ್ತು. ಅದನ್ನು ನೋಡುತ್ತಾ ಇದ್ದ ಮೂರನೇ ಮನೆಯವರ ಮಗನಾದ ಆಚಾರಿ, ಸೋಮಪ್ಪನ ಮಗ ರಾಮಪ್ಪ ನೊಂದಿಗೆ, "ನಿಮ್ಮದು ಸೊಗಸಾದ ಜೀವನ ರಾಜರ ಹಾಗೆ! ನಿಮಗೇನು ಕಡಿಮೆ? ಬೇಕಾದಷ್ಟು ಧಾನ್ಯ! ಮನೆ ತುಂಬಾ ಹಾಲು! ದೊಡ್ಡದಾದ ಮನೆ! ಏನೂ ಚಿಂತೆಯಿಲ್ಲ ಬಿಡು!..." ಎಂದನು ಸ್ವಲ್ಪ ಅಸೂಯೆಯಿಂದ.

ರಾಮಪ್ಪನು ಅವನ ಮಾತು ಕೇಳಿ ನಗುತ್ತ, "ಅಲ್ಲೋ ಆಚಾರೀ! ನೀನು ಹೇಗೂ ಕೆಲಸವಿಲ್ಲದೆ ಸುಮ್ಮನೆ ತಾನೇ ಮನೇಲಿದ್ದೀ? ನಮ್ಮೊಂದಿಗೆ ಹೊಲ ದಲ್ಲಿ ಕೆಲಸಕ್ಕೆ ಬರಬಾರದೇನು? ದಿನಕ್ಕೆ ಮೂರು ರೂಪಾಯಿ ಕೊಡಿಸುವ ಏರ್ಪಾಡು ಮಾಡುತ್ತೇನೆ. ಅಗತ್ಯವಿರುವಾಗ ಬಂದುಬಿಡು." ಎಂದನು.

ದಿನಕ್ಕೆ ಮೂರು ರೂಪಾಯಿ ಎಂಬ ಮಾತು ಕೇಳಿ ಆಚಾರಿಗೆ ಆಶೆ ಹುಟ್ಟಿತು. ಇತರರೊಂದಿಗೆ ಸಹಾಯಕನಾಗಿ ಹೋದರೆ ಸಾಕು!

ಆ ಬೇಸಗೆ ಮುಗಿದು ಮೃಗಶಿರಾ ಮಳೆಯ ಪ್ರವೇಶ ಕಾಲದಲ್ಲಿ ಬೇಸಾಯದ ಕೆಲಸ ಪ್ರಾರಂಭವಾಯಿತು. ಆಚಾರಿ ಗಾಡಿಯಲ್ಲಿ ಹೋಗಿ, ಕೊಡೆ ಹಿಡಿದು ಕೊಂಡು ಬಿಸಿಲಿನಲ್ಲಿ ನಿಂತು ಸೋಮಪ್ಪನ ಬೀಜದ ಹೊಲದಲ್ಲಿ ಬಿತ್ತನೆ ಹಾಕಿಸಿದನು. ಆ ಎರಡು ದಿನ ಗಳಿಗೆ ರಾಮಪ್ಪನು ಆಚಾರಿಗೆ ಆರು ರೂಪಾಯಿ ಗಳನ್ನು ಕೊಡಿಸಿದನು. ಅಷ್ಟುಮಾತ್ರವಲ್ಲದೆ, ಹೊಲದ ಹತ್ತಿರವಿದ್ದ ಕೆರೆ ಕಟ್ಟೆಯ ತೆಂಗಿನ ಮರದಿಂದ ಬಾಳಪ್ಪನು ತೆಗೆದು ಕೆತ್ತಿ ಕೊಟ್ಟ ಸೀಯಾಳದ ನೀರು ಬಲುರುಚಿಯಾಗಿತ್ತು. ಗದ್ದೆಯಲ್ಲಿ ಬಿತ್ತನೆಮಾಡಿ ದಣಿದ ಆಚಾರಿಗೆ ಹೊಲದ ಕೆಲಸ ತುಂಬ ಸುಲಭವೆನಿಸಿತು.

ಮೂರು ವಾರಗಳ ಅನಂತರ ಸುತ್ತುಮುತ್ತಲಿನ ಗದ್ದೆಗಳಲ್ಲಿ ಉಳುಮೆ ಪ್ರಾರಂಭವಾಯಿತು. ಹತ್ತಿರ ವಿದ್ದು ಉಳುಮೆ ನೋಡಿಕೊಳ್ಳುವಂತೆ ಸೋಮಪ್ಪನು ಆಚಾರಿಯನ್ನು ಕರೆದು ಹೇಳಿದನು. ಆಚಾರಿ ಗದ್ದೆಗೆ ಹೋಗುವಾಗ ಮಳೆ ಹನಿ ಬೀಳಲು ಪ್ರಾರಂಭ ವಾಯಿತು. ಹುಣಿಗಳೆಲ್ಲ ಕೆಸರಾಗಿ ಜಾರ ತೊಡಗಿದುವು. ಎತ್ತುಗಳನ್ನು ತಂದು ನೇಗಿಲಿಗೆ ಜೋಡಿಸುವಾಗ ಆಚಾರಿ ಎರಡು ಮೂರುಬಾರಿ ಜಾರಿ ಬಿದ್ದನು. ಉಳು

ಆರ್. ಸತ್ಯನಾರಾಯಣಮೂರ್ತಿ

ವವನು ವಿಶ್ರಾಂತಿ ಬಯಸಿದಾಗ ಆಚಾರಿಯೇ ನೇಗಿಲು ಹಿಡಿದು ಉಳಬೇಕಾಯಿತು. ಮೂರನೇ ದಿನದಲ್ಲಿ ಸೋಮಪ್ಪನವರು ಹಾರೆ ಹಿಡಿದು ಬದಿ ಕಡಿಯಲು ಹೇಳಿದರು. ಆ ಕೆಲಸಮಾಡುವಾಗ ಆಚಾರಿಗೆ ತೋಳುಗಳು ನೊಂದುವು. ಸಾಯಂಕಾಲ ದಲ್ಲಿ ಸಿಗುವ ರೂಪಾಯಿಗಳು ಆ ನೋವಿಗೆ ಶಮನ ವೆನಿಸಿತು. ಮಳೆಗಾಲವಾದುದರಿಂದ ಯಾವಾಗ ಮಳೆ ಬರುತ್ತೆ, ಯಾವಾಗ ಬಿಡುತ್ತೆ ಎಂಬುದನ್ನು ಹೇಳು ವಂತಿಲ್ಲ. ಅಂತೂ ಏಳೆಂಟು ದಿನಗಳವರೆಗೆ ಉಳುಮೆ ಮುಗಿದು ಏರು ತಗ್ಗುಗಳ ಮೇಲೆ ಹಲಗೆನೇಗಿಲು ಓಡಿಸಿ ಸಪಾಯಿ ಮಾಡಿಸಿದ್ದಾಯಿತು. ಆಗ ಆಚಾರಿಗೆ ತುಂಬಾ ಏದುಸಿರು ಬಂದರೂ ಹಿಂಜರಿಯಲಿಲ್ಲ.

ಆ ಮೇಲೆ ದಿನಾ ನೂರುಮಂದಿ ಕೂಲಿಯಾಳು ಗಳೊಂದಿಗೆ ನಟ್ಟಿಮಾಡಿಸುವ ಜವಾಬ್ದಾರಿಯನ್ನು ಆಚಾರಿಗೇ ವಹಿಸಿ ಕೊಡಲಾಯಿತು. ಅದು ಮುಗಿಯಲು ಹತ್ತು ದಿನಗಳು ಬೇಕಾಯಿತು. ಆ ಹತ್ತು ದಿನಗಳೂ ಆಚಾರಿ ಬೆಳಿಗ್ಗೆ ಎಂಟು ಗಂಟೆಗೆಲ್ಲಾ ಕೆಲಸಕ್ಕೆ ಹೋಗಿ, ಸಾಯಂಕಾಲ ಕಳೆದ ಮೇಲೆ ಮನೆಗೆ ಹಿಂದಿರುಗುತ್ತಿದ್ದನು. ಆ ಹತ್ತು ದಿನಗಳಿಗೆ ಸಿಕ್ಕಿದ ಕೂಲಿಯ ಹಣವನ್ನು ನೋಡಿ ಶ್ರಮಕ್ಕೆ ತಕ್ಕ ಫಲ ಸಿಕ್ಕಿದ ತೃಪ್ತಿ ಅವನಿಗಾಯಿತು.

ಸೋಮಪ್ಪನ ಹೊಲಗದ್ದೆಗಳಲ್ಲಿ ಒರೆಸಾಡಿದು ದರಿಂದ ಅವನ ಕಾಲಿಗೆ ಕೆಸರು ಅಂಟಿ, ನಂಜಿನವೆಗಳು ಶುರುವಾದುವು. ಮಳೆಯಲ್ಲಿ ನೆನೆದುದರಿಂದ ಶೀತ ವಾಗಿ ಗಂಟಲುಕಟ್ಟಿ ಮೂಗು ನೊಂದಿತು. ಎರಡು ದಿನ ಸ್ವಲ್ಪ ಜ್ವರವೂ ಬಂದು ಕಷಾಯ ಕುಡಿದು, ಸವಾಳಿಸಿ ಕೊಳ್ಳಬೇಕಾಯಿತು.

ಸೋಮಪ್ಪನ ಗದ್ದೆಗಳಲ್ಲಿ ಬಹಳ ಮಟ್ಟಿಗೆ ಬತ್ತದ ಪೈರೇ ಆದುದರಿಂದ, ತೊಂಬತ್ತು ದಿನಗಳಿಗೆಲ್ಲಾ ಪೈರು ಕೊಯ್ಲಿಗೆ ತಯಾರಾಗುತ್ತಿತ್ತು. ಕೊಯಿಲಿಗೆ ಕೂಡಾ ಆಚಾರಿಯನ್ನು ಸಹಾಯಕ್ಕೆ ಕರೆದರು. ಆಚಾರಿಯೂ, ರಾಮಪ್ಪನೂ, ಸೋಮಪ್ಪನೂ ಹೊಲ ಗಳಲ್ಲಿ ಚಪ್ಪರ ಮಂಚಿಕೆ ಕಟ್ಟಿಕೊಂಡು ಒಂದೊಂದು ದಿನ ಒಬ್ಬೊಬ್ಬರಂತೆ ರಾತ್ರಿಯಲ್ಲಿ ಕಾವಲು ಕಾದರು.



ಬೆಳೆಗಳ ಮೇಲೆ ಕಳ್ಳರು ಬಂದು ಬೀಳುವ ಕಾಲವು ಅದೇ. ಆಗ ಚಳಿಗಾಲವಾದುದರಿಂದ ಚರ್ಮ ಚಿಟುಕರಿಸುವಂತಹ ಚಳಿಯಿತ್ತು. ಚಪ್ಪರದೊಳಗೆ ಮಂಜು ಪ್ರವೇಶಿಸಿ ಒಳಗಿರುವವನ ಶರೀರವನ್ನು ಕೊರೆಯುತ್ತಿತ್ತು. ಕೊಯಿಲು ಮುಗಿದು, ಅಂಗಳಕ್ಕೆ ಸಾಗಿಸಿ, ಹರಡಿಸಿ, ಧಾನ್ಯ ಹೊಡೆಸಿ, ಹುಲ್ಲು ಮೆಟ್ಟಿ, ಬತ್ತದ ರಾಶಿಗಳನ್ನು ಬೇರ್ಪಡಿಸುವಾಗ ಒಂದು ವಾರ ದಿನಗಳಾದುವು. ಆಚಾರಿಗೆ ಇಪ್ಪತ್ತೈದು ರೂಪಾಯಿಗಳವರೆಗೆ ಸಿಕ್ಕಿತು. ವ್ಯವಸಾಯಗಾರರು ಎಷ್ಟು ವಿಧವಾಗಿ ಕಷ್ಟಪಡುವರೆಂದು ಈಗೀಗ ಆಚಾರಿಗೆ ತಿಳಿದು ಬರತೊಡಗಿತು. ಕೇವಲ ಸಹಾಯಕ್ಕೆ ಹೋದವನಿಗೇ ಇಷ್ಟು ಕಷ್ಟವಾಗಿದ್ದರೆ, ಅದೇ ಕೆಲಸಮಾಡುವ ರೈತರಿಗೆ ಎಷ್ಟು ಕಷ್ಟವಾಗಬೇಡ!

ಗದ್ದೆಯ ಅಂಗಳದಲ್ಲಿಯೇ ಬತ್ತದರಾಶಿ ಗುಡ್ಡಗಳಂತಿದ್ದುದರಿಂದ, ಅವುಗಳೆಲ್ಲ ಮನೆಗೆ ತಲಪುವವರೆಗೆ ಕಾವಲುಕಾಯಲು ಸೋಮಪ್ಪನವರು ಆಚಾರಿಯನ್ನೇ ಕರೆದರು. ರಾತ್ರಿಯಲ್ಲಿ ಕಳ್ಳರು ಬಂದು ಧಾನ್ಯಗಳನ್ನು ಕದ್ದುಕೊಂಡು ಹೋಗಬಾರದಷ್ಟೇ ?

ಕಾವಲಿದ್ದರೂ ಒಂದು ದಿನ ರಾತ್ರಿ ಕಳ್ಳರು ಗದ್ದೆಯ ಅಂಗಳಕ್ಕೆ ಬಂದು ನಾಲ್ಕೈದು ಚೀಲ ಬತ್ತವನ್ನು ಗೋಣಿಗೆ ತುಂಬಿಸಿಕೊಂಡರು. ರಾತ್ರಿ ಎಚ್ಚರದಲ್ಲಿ ತಿರುಗುತ್ತಾ, ಕಾವಲು ಕಾಯಬೇಕೆಂದು ಸೋಮಪ್ಪನವರು ಹೇಳಿದ್ದರು. ಆಚಾರಿ ಹಾಗೆಯೇ ಮಾಡಿದುದರಿಂದ ಕಳ್ಳರನ್ನು ನೋಡಿಬಿಟ್ಟನು. ಕಳ್ಳರು ಹೆದರಿ ಚೀಲಗಳನ್ನು ಅಲ್ಲೇ ಬಿಟ್ಟು ಓಡಿಬಿಟ್ಟರು. ಅವರು ನಿಜವಾದ ಕಳ್ಳರಾಗಿರಲಿಲ್ಲ. ಆಚಾರಿಯನ್ನು ಪರೀಕ್ಷಿಸಲಿಕ್ಕಾಗಿ ರಾಮಪ್ಪನು ನಿಯಮಿಸಿದ ಆಳುಗಳೇ !

ಅಂತೂ ಧಾನ್ಯವೆಲ್ಲ ಗಾಡಿಗಳಲ್ಲಿ ಮನೆ ಸೇರಿ, ಕಣಜಕ್ಕೆ ತುಂಬಿಸಲ್ಪಟ್ಟಿತು. ಆಚಾರಿಯೇ ಅಳೆಯಿಸಿ ತುಂಬಿಸುವುದರಲ್ಲಿ ಸಹಾಯಮಾಡಿದನು. ಆಗ ರಾಮಪ್ಪನು ಅವನೊಂದಿಗೆ "ಏನೋ ಆಚಾರೀ! ಬೇಸಾಯದ ಕೆಲಸ ಹೇಗಿದೆ ? ಕಳೆದ ವರ್ಷ ನೀನು ಹೇಳಿದ ಮಾತು ನೆನಪಿದೆಯೇ? " ಎಂದನು.

"ಏನೋ ಗಾಡಿಗಳಲ್ಲಿ ಧಾನ್ಯ ಬರುವುದನ್ನು ನೋಡಿದೆನೇ ಹೊರತು, ಇಷ್ಟೆಲ್ಲ ಸಾಧಕ ಬಾಧಕಗಳಿವೆಯೆಂದು ಗೊತ್ತಿರಲಿಲ್ಲ. ನಿನ್ನ ಪುಣ್ಯದಿಂದ ನನಗೂ ಸ್ವಲ್ಪ ಕಷ್ಟಪಟ್ಟು ಕೆಲಸಮಾಡಲು ಅಭ್ಯಾಸವಾಯಿತು " ಎಂದನು ಆಚಾರಿ.

ರಾಮಪ್ಪ ನಗುತ್ತ "ದೂರದ ಬೆಟ್ಟ ನುಣ್ಣಗೆ ಅಂತ ಸುಮ್ಮನೆ ಹೇಳಿಲ್ಲ. ಹತ್ತಿರ ಹೋದರೇ ತಿಳಿಯುತ್ತೆ. ಕಷ್ಟಪಟ್ಟರೇ ಸುಖ ಬರುತ್ತೆ" ಎಂದನು.

ಆಚಾರಿ ಊರೊಳಗಿನ ಎಲ್ಲಾ ದೊಡ್ಡ ದೊಡ್ಡ ರೈತರ ವ್ಯವಸಾಯದಲ್ಲಿಯೂ ಸಹಾಯಕನಾಗಿ, ತನ್ನ ಕಾಲ ಮೇಲೆ ತಾನು ನಿಲ್ಲಲು ಕಲಿತು ಮೇಲೆ ಬಂದನು.





# ದೇವೀಭಾಗವತ

**ಪೂ**ರ್ವ ಕಾಲದಲ್ಲಿ ದೇವತೆಗಳಿಗಿಂತ ದೊಡ್ಡವನಾಗಿಯೂ, ದೊಡ್ಡ ತಪಸ್ಸುಮಾಡಿದ ಮಹಾಪುರುಷನಾಗಿಯೂ ಹೆಸರು ಪಡೆದವನಾದ ತ್ವಷ್ಟೃ ಪ್ರಜಾಪತಿಗೆ ಇಂದ್ರನ ಮೇಲೆ ತುಂಬಾ ದ್ವೇಷವಿದ್ದಿತು. ಇಂದ್ರನು ತಪಸ್ವಿಗಳಿಗೆ ವಿರೋಧಿ ಎಂಬುದು ಅವನ ನಂಬುಗೆ. ಅಂತಹ ಇಂದ್ರನನ್ನು ಹತಮಾಡುವುದೇ ಅವನ ಉದ್ದೇಶವಾಯಿತು. ಅದಕ್ಕಾಗಿಯೇ ಅವನು ಮೂರು ತಲೆಗಳಿರುವ ವಿಶ್ವರೂಪನೆಂಬ ಅದ್ಭುತ ಮಗನನ್ನೇ ಸೃಷ್ಟಿ ಮಾಡಿಕೊಂಡನು. ಅವನು ಬೆಳೆದು ದೊಡ್ಡವನಾಗುತ್ತಾ ಬಂದಂತೆ ಮೂರು ತಲೆಗಳಿಂದ ಒಂದೇ ಬಾರಿ ಬೇರೆ ಬೇರೆ ಕೆಲಸಗಳನ್ನು ಮಾಡುತ್ತಿದ್ದನು. ಒಂದು ಬಾಯಿಯಿಂದ ವೇದಪಠನ ಮಾಡುತ್ತಿದ್ದರೆ, ಇನ್ನೊಂದು ಬಾಯಿಯಿಂದ ಪಾನೀಯವನ್ನು ಕುಡಿಯುವನು. ಮೂರನೇ ಮುಖದಿಂದ ಪ್ರಪಂಚದಲ್ಲಿ ನಡೆಯುವುದನ್ನು ನೋಡುವನು.

ಅಂತಹ ವಿಶ್ವರೂಪನು ಒಂಟಿಕಾಲಿನಿಂದ ನಿಂತೂ, ನೀರಿನ ಮೇಲೆ ಪದ್ಮಾಸನದಲ್ಲಿ ಕುಳಿತೂ, ಬೇಸಗೆಯಲ್ಲಿ ಪಂಚಾಗ್ನಿಗಳ ನಡುವೆ ನಿಂತೂ ನಿರಾಹಾರಿಯಾಗಿ ಅವನು ಘೋರ ತಪಸ್ಸು ಮಾಡುವುದನ್ನು ನೋಡಿ ದೇವೇಂದ್ರನಿಗೆ ಭಯವಾಯಿತು. ಅವನು ತನ್ನ ಇಂದ್ರ ಪದವಿಯನ್ನು ವಶಪಡಿಸಿಕೊಳ್ಳಲಿಕ್ಕಾಗಿಯೇ ಕಠಿನ ತಪಸ್ಸು ಮಾಡುವನೆಂದು ತಿಳಿದು, ಅವನ ತಪಸ್ಸನ್ನು ಭಗ್ನಗೊಳಿಸಬೇಕೆಂದುಕೊಂಡು, ತನ್ನ ಸಭೆಯಲ್ಲಿರುವ ಸುಂದರಾತಿ ಸುಂದರಿಯರಾದ ರಂಭಾ, ಊರ್ವಶಿ, ಮೇನಕೆಯರನ್ನು ಕರೆದು, “ಸುಂದರಾಂಗಿಯರೇ, ಭೂಮಿಯಲ್ಲಿ ಮೂರು ತಲೆಗಳಿರುವವನೊಬ್ಬನು ನನ್ನ ಸಿಂಹಾಸನದ ಮೇಲಿನ ಆಶೆಯಿಂದ ಘೋರವಾದ ತಪಸ್ಸಿನಲ್ಲಿ ಮಗ್ನನಾಗಿದ್ದಾನೆ. ನೀವು ಹೋಗಿ ನಿಮ್ಮ ಚೆನ್ನಾಟಗಳಿಂದ ಹೇಗಾದರೂ ಅವನ ತಪಸ್ಸನ್ನು ಹಾಳುಮಾಡಿ, ನನಗೆ ಬರಲಿರುವ ಈ ಹಾಳು ವಿಘ್ನವನ್ನು ತೊಲಗಿಸಿಬಿಡಿರಿ. ನಿಮ್ಮ ನೃತ್ಯಗಾನ ಕಲಾ ಕೌಶಲವನ್ನು ಪ್ರದರ್ಶಿಸಿ ಆ ವಿಶ್ವರೂಪನು ಮೋಹ ಪಾಶದಲ್ಲಿ ಸಿಕ್ಕಿಕೊಂಡು ತಪಸ್ಸು ಬಿಟ್ಟು ಹೋಗುವ ಹಾಗೆ

೧೭. ವೃತ್ರನ ವಿಜೃಂಭಣೆ



ಆಗುವುದನ್ನು ನೋಡಿ ಆಶ್ಚರ್ಯಪಡುತ್ತ, ಬೇಸತ್ತು ಇಂದ್ರನ ಬಳಿಗೆ ಹಿಂದಿರುಗಿ ಹೋಗಿ, "ಪ್ರಭುವೇ! ನಮ್ಮ ಎಲ್ಲಾ ಪ್ರಯತ್ನಗಳೂ ಆ ಮುನಿಯ ಮುಂದೆ ಬೂದಿಗೆ ಹಾಕಿದ ಪನ್ನೀರಾಯಿತು. ಅವನ ಶಾಪಕ್ಕೊಳಗಾಗದೆ ಬಂದದ್ದೇ ನಮ್ಮ ಪುಣ್ಯ" ಎಂದರು.

ಅದನ್ನು ಕೇಳಿ ಇಂದ್ರನು ಮಹಾತ್ಮನಾದ ಆ ವಿಶ್ವರೂಪನನ್ನು ಕೊಲ್ಲಲು ನಿಶ್ಚಯಿಸಿ ಎದ್ದನು. ಸುಮ್ಮನಿರುವವನನ್ನು ಕೊಲ್ಲುವುದರಿಂದ ಎಷ್ಟು ದೊಡ್ಡ ಪಾಪವಾಗುವುದೆಂಬುದನ್ನು ಅವನು ಆಲೋಚನೆ ಮಾಡಲಿಲ್ಲ. ಅವನು ತನ್ನ ಐರಾವತದ ಮೇಲೇರಿಕೊಂಡು ವಿಶ್ವರೂಪನು ತಪಸ್ಸಮಾಧಿಯಲ್ಲಿರುವ ಸ್ಥಳಕ್ಕೆ ಬಂದು, ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿ ಕೊಂದೇಬಿಟ್ಟನು. ವಿಶ್ವರೂಪನು ಒಂದು ಶಬ್ದವನ್ನೂ ಮಾಡದೆ ವಜ್ರಾಯುಧದ ಏಟಿನಿಂದ ಸತ್ತುಬಿದ್ದನು.

ಅದನ್ನು ನೋಡಿ ಮುನಿಗಳು, "ಈ ದೇವೇಂದ್ರನಿಗೆ ಇಂತಹ ಕೆಟ್ಟ ಸಾಹಸ ಏಕೆ ಬಂತೋ! ಅಂತಹ ಪುಣ್ಯಾತ್ಮನನ್ನೇ ಸುಮ್ಮನೆ ಕೊಂದು ಬಿಟ್ಟನಲ್ಲಾ! ಇದರ ಫಲ ತಪ್ಪದೆ ಅನುಭವಿಸಿ ತೀರುತ್ತಾನೆ!" ಎಂದು ತಮ್ಮೊಳಗೆ ಮಾತಾಡಿಕೊಂಡರು.

ವಿಶ್ವರೂಪನು ಸತ್ತುಬಿದ್ದುದನ್ನು ನೋಡಿ ಇಂದ್ರನು ಹಿಂದಿರುಗಿ ಹೋದನು. ಆದರೆ ಅವನ ಮನಸ್ಸಿನಲ್ಲಿ ಒಂದು ಸಂದೇಹ ಉಳಿದುಹೋಯಿತು. ಸತ್ತುಹೋದ ವಿಶ್ವರೂಪನು ಮತ್ತೆ ಬದುಕಿ ಏಳಲಾರನಷ್ಟೆ? ಏಕೆಂದರೆ ವಜ್ರಾಯುಧದ ಪೆಟ್ಟು ತಿಂದು ಸತ್ತುಬಿದ್ದ ಮೇಲೆ ಕೂಡಾ ವಿಶ್ವರೂಪನ ತೇಜಸ್ಸು ಸ್ವಲ್ಪವೂ ಮಂಗಿರಲಿಲ್ಲ.

ಈ ಅನುಮಾನದಿಂದ ದೇವೇಂದ್ರನು, ತನ್ನ ಬಡಗಿಯನ್ನು ಕರೆದುಕೊಂಡು ವಿಶ್ವರೂಪನ ಬಳಿಗೆ ಬಂದು "ನೋಡು, ಇವನು ಸತ್ತು ಕೂಡಾ ಜೀವಕಳೆಯಿಂದಿರುವ ಹಾಗೇ ಇದ್ದಾನೆ. ಅವನು ಮತ್ತೆ

ಮಾಡಿ ಬನ್ನಿರಿ. ಈ ನಿಮ್ಮ ಸಹಾಯಕ್ಕಾಗಿ ನಿಮ್ಮನ್ನು ತುಂಬಾ ಸಂತೋಷಪಡಿಸುತ್ತೇನೆ" ಎಂದನು.

ಹೀಗೆ ಇಂದ್ರನು ದೀನ ಭಾವದಿಂದ ಹೇಳುವುದನ್ನು ಕೇಳಿ, ಆ ಅಪ್ಸರೆಯರು ಉಬ್ಬಿಕೊಂಡು, "ನೀವು ಆ ಚಿಂತೆ ಬಿಡಿರಿ. ನಮ್ಮ ತಳಕು ಬೆಳಕು ವಿದ್ಯುತ್ ಕಟಾಕ್ಷಗಳಿಂದ ಆ ಮುನಿಯುನ್ನು ನಮ್ಮ ದಾಸನಾಗಿ ಮಾಡಿಬಿಡುತ್ತೇವೆ" ಎಂದು ಹೇಳಿ ವಿಶ್ವರೂಪನ ಆಶ್ರಮಕ್ಕೆ ಬಂದರು.

ವಿಶ್ವರೂಪನ ಇದಿರಿನಲ್ಲಿ ಆ ದೇವಲೋಕದ ಅಪ್ಸರಸಿಯರು, ಹಾಡುತ್ತಾ ನರ್ತಿಸುತ್ತಾ ಚಿತ್ರವಿಚಿತ್ರವಾದ ಮೋಹಕ ಅಭಿನಯಗಳಿಂದ ಏನೇನು ಮಾಡಿದರೂ, ವಿಶ್ವರೂಪನು ಕುರುಡನೂ ಕಿವುಡನೂ ಆದಂತೆ ಸ್ವಲ್ಪ ಕೂಡಾ ಚಲಿಸದಿದ್ದನು. ಅಪ್ಸರಸಿಯರು ಬೇಸರಪಡದೆ ಕೆಲವು ದಿನಗಳವರೆಗೆ ವಿಶ್ವರೂಪನ ಮುಂದೆ ತಮ್ಮ ಆಟಪಾಟಗಳನ್ನು ಪ್ರದರ್ಶಿಸುತ್ತ, ಬರಿಗೋಡೆಯ ಮುಂದೆ ಆಡಿದ ಹಾಗೆಯೇ

ಬದುಕಿ ಏಳದಹಾಗೆ ಅವನ ತಲೆಗಳನ್ನು ಕಡಿದು ಬಿಡು " ಎಂದನು.

ಅದನ್ನು ಕೇಳಿ ಬಡಗಿ, "ಇದೆಂಥ ಕೆಲಸ ? ಇವನು ವಜ್ರಾಯುಧದ ಪೆಟ್ಟಿಗೆ ಸತ್ತುಹೋಗಿದ್ದಾನೆ. ಸತ್ತವನನ್ನು ಕಡಿದು ಪಾಪ ಕಟ್ಟಿಕೊಳ್ಳಲು ಹೇಳುವಿರಾ ? ನೀವು ಕಾರಣವೇನಿಲ್ಲದೆ ಈ ಮುನಿಯನ್ನು ಕೊಂದಿರಲಿಕ್ಕಿಲ್ಲ. ಆ ಕಾರಣವೇನೆಂದು ನನಗಂತೂ ಗೊತ್ತಿಲ್ಲ. ಆದರೂ ಸತ್ತುಹೋದವನ ತಲೆ ಕಡಿಯಬೇಕಾದ ಕೆಲಸವೇಕೆ ? ಒಂದಲ್ಲ ಮೂರು ತಲೆಗಳಿವೆ. ಈ ಸತ್ತವನನ್ನು ನೋಡಿ ನಿಮಗೇಕೆ ಇಷ್ಟು ಭಯವೋ?" ಎಂದು ಕೇಳಿದನು.

"ಇವನೊಬ್ಬ ದೊಡ್ಡ ತಪಸ್ವಿ ಎಂಬುದೇನೋ ನಿಜ. ಆದರೇನು ? ನನಗೆ ಶತ್ರು. ಶತ್ರುವನ್ನು ಕೊಲ್ಲಬೇಕಾದ್ದು ವಿಧಿಯೇ ಆದ್ದರಿಂದ ಕೊಂದಿದ್ದೇನೆ. ಸತ್ತರೂ ಬದುಕಿರುವವನ ಹಾಗೆ ಕಾಣುತ್ತಾನೆ. ಅಗ್ನಿ ಶೇಷ, ಋಣ ಶೇಷ, ಶತ್ರು ಶೇಷಗಳನ್ನು ಉಳಿಯಗೊಡಬಾರದಷ್ಟೆ? ಅದಕ್ಕೇ ತಲೆ ಕಡಿಯಲು ಹೇಳುತ್ತೇನೆ" ಎಂದನು ಇಂದ್ರ.

"ಇದೊಳ್ಳೇ ಕತೆಯಾಯಿತಲ್ಲ! ನಿರಪರಾಧಿಯಾಗಿ ಬ್ರಹ್ಮ ತೇಜಸ್ಸಿನಿಂದ ಬೆಳಗುವ ಈ ಮಹಾಮುನಿಯನ್ನು ಕೊಂದ್ದು ಹಾಕಿರುವ ನಿಮಗೆ, ಬ್ರಹ್ಮ ಹತ್ಯೆಯ ದೋಷ ಬರುತ್ತದೆಂಬ ಭಯ ಕೂಡಾ ಇಲ್ಲವೇ?" ಎಂದು ಬಡಗಿ ಕೇಳಿದನು.

"ನನಗೆ ಶತ್ರುಶೇಷದ ಮೇಲಿರುವಷ್ಟು ಭಯವು ಬ್ರಹ್ಮಹತ್ಯಾಪಾಪದ ಮೇಲೆ ಇಲ್ಲ. ಆ ಪಾಪವನ್ನು ಹೇಗಾದರೂ ಕಳೆದುಕೊಳ್ಳಬಹುದು. ಶತ್ರುಶೇಷ ಬೆಳೆದುಬಿಟ್ಟರೆ ಹಾಗೆಲ್ಲಾ ಕಳೆದುಕೊಳ್ಳಲು ಸಾಧ್ಯವಿಲ್ಲವಷ್ಟೆ? ಆದುದರಿಂದ ಶತ್ರು ನಿರ್ಮೂಲನಕ್ಕಾಗಿ ಎಂತಹ ಪಾಪವನ್ನಾದರೂ ಮಾಡಬಹುದು." ಎಂದನು ಇಂದ್ರ. ಆದರೂ ಬಡಗಿ ಒಪ್ಪದೆ, ಅನುಮಾನಿಸುತ್ತ, "ಇಂತಹ ಮಹಾ ಪಾಪದ ಕಾರ್ಯಕ್ಕೆ ಏನೋ



ಲಾಭವು ನಿಮ್ಮನ್ನು ಹುರಿಗೊಳಿಸಿರಬಹುದು. ನನ್ನನ್ನು ಹಾಗೆ ಯಾವ ಲಾಭವೂ ಹುರಿಗೊಳಿಸಲಿಲ್ಲವಲ್ಲಾ ? ತಿಳಿತಿಳಿದೇ ನಾನೇಕೆ ಇಂತಹ ಪಾಪವನ್ನು ಮಾಡಲಿ? " ಎಂದು ಕೇಳಿದನು.

"ನೀನು ಹೀಗೆ ಹೇಳುವುದಾದರೆ ನಿನಗೊಂದು ಲಾಭವನ್ನು ಕೊಡಿಸುತ್ತೇನೆ. ಇನ್ನು ಮೇಲೆ ಯಜ್ಞದಲ್ಲಿ ಒಂದು ಭಾಗವನ್ನು ವಿಶ್ವಕರ್ಮನಿಗೂ ಕೊಡಬೇಕೆಂದು ಶಾಸನಮಾಡುತ್ತೇನೆ. ಯಜ್ಞದಲ್ಲಿ ಬಲಿ ಕೊಡುವ ಯಜ್ಞ ಪಶುವಿನ ತಲೆ ಇನ್ನು ಮೇಲೆ ನಿನಗೆ ದಕ್ಕುತ್ತದೆ!" ಎಂದನು ಇಂದ್ರ.

ಆ ಮಾತು ಕೇಳು ಬಡಗಿ ತನ್ನ ಕೊಡಲಿಯಿಂದ ವಿಶ್ವರೂಪನ ತಲೆಗಳನ್ನು ಕಡಿದನು. ಆಗ ಒಂದು ಅದ್ಭುತ ದೃಶ್ಯವು ಹೊರಬಿತ್ತು. ಆ ತಲೆಗಳು ನೆಲದ ಮೇಲೆ ಬೀಳುವಾಗ, ಒಂದೊಂದು ತಲೆಯಿಂದಲೂ ಬಗೆಬಗೆಯ ಪಕ್ಷಿಗಳು ಅನೇಕ ಸಾವಿರ ಸಂಖ್ಯೆಯಲ್ಲಿ ಹೊರಗೆ ಬಂದು ಆಕಾಶವನ್ನೆಲ್ಲಾ ತುಂಬಿಕೊಂಡು



ಹಾರಿಹೋದುವು. ವೇದವನ್ನು ಓದುವ ಮುಖದಿಂದ ಕಪಿಂಜಲವೆಂಬ ಪಕ್ಷಿಗಳೂ, ಪ್ರಪಂಚ ಪರಿಶೀಲನೆ ಮಾಡುವ ಮುಖದಿಂದ ತಿತ್ತಿರಿ ಪಕ್ಷಿಗಳೂ, ಪಾನೀಯ ಸೇವಿಸುವ ಮುಖದಿಂದ ಊರಗುಬ್ಬಿಗಳೂ ಹೊರಬಿದ್ದುವು. ಹೀಗೆ ತನ್ನ ಕೆಲಸ ಮುಗಿಯಿತೆಂಬ ತೃಪ್ತಿಯಿಂದ ಇಂದ್ರನು ಅಲ್ಲಿಂದ ಹೊರಟುಹೋಗಿ, ತನಗುಂಟಾದ ಬ್ರಹ್ಮಹತ್ಯಾಪಾತಕಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಪ್ರಯತ್ನಕ್ಕೆ ತೊಡಗಿದನು.

ವಿಶ್ವರೂಪನನ್ನು ಸುಮ್ಮ ಸುಮ್ಮನೇ ಇಂದ್ರನು ಕೊಂದ ಸಮಾಚಾರ ಅವನ ತಂದೆ ತ್ವಷ್ಟ್ರು ಪ್ರಜಾಪತಿಗೆ ತಿಳಿಯಿತು. ತನ್ನ ಪುತ್ರನನ್ನು ಇಂದ್ರನು ಕೊಲೆ ಮಾಡಿದನೆಂದು ತಿಳಿದು ತ್ವಷ್ಟ್ರು ಪ್ರಜಾಪತಿ ಕೋಪದಿಂದ ಉರಿದುಬಿದ್ದು, "ಎಲೆಲೋ ದೇವತೆಗಳೇ! ನೋಡಿದಿರಾ ನೀವೆಲ್ಲರೂ? ಯಾವ ಪಾಪವನ್ನೂ ಅರಿಯದೆ ತಪಸ್ಸುಮಾಡಿಕೊಂಡಿದ್ದ ನನ್ನ ಮಗನನ್ನು ಕೊಂದ ಇಂದ್ರನನ್ನು ನಾಶಮಾಡದೆ ಬಿಡುವೆನೆಂದು ಕೊಂಡಿರಾ? ಇಂದ್ರನನ್ನು ನಾಶಮಾಡತಕ್ಕಂತಹ ಮಹಾಬಲಿಷ್ಠನಾದ ಮಗನನ್ನೇ ನಾನು ಪಡೆಯುತ್ತೇನೆ, ನೋಡಿರಿ!" ಎಂದು ಹೇಳಿಕೊಂಡು, ಅಥರ್ವಣ ವೇದ ಮಂತ್ರಗಳಿಂದ ಅಗ್ನಿಯನ್ನು ಅರ್ಚಿಸಿ ಹೋಮ ಮಾಡ ತೊಡಗಿದನು. ಆಗ ಅಗ್ನಿಹೋತ್ರನಿಗೆ ಸಮಾನನಾದ ಪುತ್ರನು ಅಗ್ನಿಕುಂಡದಿಂದ ಹುಟ್ಟಿಬಂದನು.

ತ್ವಷ್ಟ್ರು ಪ್ರಜಾಪತಿ ಆ ಪುತ್ರನನ್ನು ನೋಡಿ, "ಮಗನೇ, ನೀನು ಹೀಗೆ ಹುಟ್ಟಿದಮಾತ್ರಕ್ಕೆ ಏನೂ ಆಗಲಿಲ್ಲ. ಕೂಡಲೇ ಬೆಳೆದು ದೊಡ್ಡವನಾಗು. ಇಂದ್ರನನ್ನು ಹತಮಾಡಿ ಬಾ! ಎಲ್ಲಾ ಈಗಲೇ ಆಗಬೇಕು!" ಎಂದು ಅವನನ್ನು ಶಾಸಿಸಿದನು.

ನೋಡ ನೋಡುತ್ತಿದ್ದಂತೆ ಆ ಶಿಶು ಪರ್ವತಾಕಾರವಾಗಿ ಬೆಳೆಯುತ್ತ, ಕಾಲಮೃತ್ಯುವಿನಂತೆ ಕಂಡುಬಂದನು. ಅವನನ್ನು ನೋಡಿ ದೇವತೆಗಳೆಲ್ಲಾ ನಡುಗುತ್ತಿರಲು, ಅವನು ತ್ವಷ್ಟ್ರು ಪ್ರಜಾಪತಿಯನ್ನು ನೋಡಿ, "ಅಪ್ಪಾ, ನನ್ನ ಹೆಸರು ಏನು? ಏತಕ್ಕಾಗಿ ನನ್ನನ್ನು ಹುಟ್ಟಿಸಿದೆ? ಏನು ಮಾಡಬೇಕು ನಾನು? ಎಂತಹ ದುಃಸಾಧ್ಯವಾಗಿದ್ದರೂ ಸಾಧಿಸಿ ಬಿಡುತ್ತೇನೆ. ತಂದೆಯ ಕೋರಿಕೆಯನ್ನು ಈಡೇರಿಸಲಾರದ ಮಗನಿದ್ದು ಏನು ಪ್ರಯೋಜನ?" ಎಂದು ತಂದೆಯನ್ನು ಕೇಳಿದನು.

ಅದಕ್ಕೆ ತ್ವಷ್ಟ್ರು ಹೀಗೆಂದನು: "ಮಗನೇ, ನಿನ್ನ ಹೆಸರು ವೃತ್ರ. ವೇದಗಳ ತತ್ವಗಳನ್ನು ತಿಳಿದವನಾಗಿ, ಮೂರು ತಲೆಗಳುಳ್ಳವನಾಗಿ, ತಪಸ್ಸು ಮಾಡಿಕೊಂಡಿದ್ದ ನಿನ್ನ ಅಣ್ಣನನ್ನು ಅನ್ಯಾಯವಾಗಿ ಕೊಂದ ಆ ಇಂದ್ರನನ್ನು ಹತಮಾಡಲಿಕ್ಕಾಗಿಯೇ ನೀನು ಹುಟ್ಟಿರುವೆ. ಆ ಕೆಲಸ ಮುಗಿಸಿಬಿಡು. ಅದುವೇ ನನ್ನ ಕೋರಿಕೆ!"

ಹೀಗೆಂದು ತ್ವಷ್ಟ್ರು ವೃತ್ರನಿಗೆ ಬಗೆಬಗೆಯ ಆಯುಧಗಳನ್ನು ಕೂಡಾ ತಯಾರಿಸಿ ಕೊಟ್ಟು, ಒಳ್ಳೆಯ ಮುಹೂರ್ತದಲ್ಲಿ, ಬ್ರಾಹ್ಮಣರ ಆಶೀರ್ವಾದಗಳೊಂದಿಗೆ ಇಂದ್ರನನ್ನು ಕೊಲ್ಲಲು ಕಳುಹಿಸಿಕೊಟ್ಟನು.



ಭಯಂಕರಾಕಾರನಾದ ವೃತ್ರನು ತನ್ನನ್ನು ಕೊಲ್ಲಲಿಕ್ಕಾಗಿಯೇ ಹುಟ್ಟಿಬರುವನೆಂಬ ಸಮಾಚಾರ ಇಂದ್ರನಿಗೆ ಕೂಡಲೇ ತಿಳಿಯಿತು. "ಇಂದ್ರಾ! ತ್ವಷ್ಟ್ರ ಪ್ರಜಾಪತಿ ನಿನ್ನನ್ನು ಕೊಲ್ಲಲಿಕ್ಕಾಗಿಯೇ ಅಥರ್ವಣ ಹೋಮದಿಂದ ಪರ್ವತಾಕಾರನಾದ ವೃತ್ರನನ್ನು ಸೃಷ್ಟಿಮಾಡಿ, ವಿಶೇಷಬಗೆಯ ಆಯುಧಗಳನ್ನೂ ಸೃಷ್ಟಿಸಿ ಕೊಟ್ಟು ಕಳುಹಿಸಿದ್ದಾನೆ. ಆ ವೃತ್ರನು ಬಲವಂತರಾದ ಅನೇಕಮಂದಿ ರಾಕ್ಷಸರನ್ನು ಕರೆದುಕೊಂಡು ಬರುತ್ತಿದ್ದಾನೆ" ಎಂದು ದೂತರು ಇಂದ್ರನೊಂದಿಗೆ ಹೇಳುತ್ತಿರುವಾಗಲೇ, ವೃತ್ರನನ್ನು ಸ್ವಯಂ ನೋಡಿ ಹೆದರಿ ಓಡಿಬಂದ ದೇವತೆಗಳು ಹೀಗೆಂದರು :

"ದೇವಾ ! ಅತಿ ಭಯಂಕರವಾದ ದುಃಶಕುನಗಳು ನಿಮ್ಮ ವಠಾರದೊಳಗೆ ಕಾಣುತ್ತವೆ. ಕಾಗೆಗಳೂ, ಗೂಗೆಗಳೂ, ರಣಹದ್ದುಗಳೂ ವಿಕಾರ ಸ್ವರದಿಂದ ಕೂಗುತ್ತಿವೆ. ಎಲ್ಲಿ ನೋಡಿದರೂ ರಾಕ್ಷಸರ ಗರ್ಜನೆಗಳು ಕಿವಿಗಳನ್ನು ಅಪ್ಪಳಿಸುತ್ತಿವೆ. ಅಂತಃಪುರ ಸ್ತ್ರೀಯರಿಗೆ ಕೆಟ್ಟ ಕನಸುಗಳು ಬಿದ್ದು ಭೀತಿಯಿಂದ ಕೂಗಿಕೊಳ್ಳುತ್ತಿದ್ದಾರೆ ! ದೇವತೆಗಳಿಗೆ ಏನೋ ಕೆಟ್ಟ ಕಾಲವು ಬಂದಿದೆ". ಈ ವಾರ್ತೆಯನ್ನು ಕೇಳಿ ಇಂದ್ರನು ಭಯಪಟ್ಟು ಬೃಹಸ್ಪತಿಯನ್ನು ನೋಡಿ, "ದೇವಗುರುಗಳೇ, ಕೇಳಿದಿರಷ್ಟೆ ? ಈ ದುಃಶಕುನಗಳಿಗೆ ಶಾಂತಿ ಹೇಗೆ ?" ಎಂದು ಕೇಳಿದನು.

"ಏನು ತಾನೇ ಶಾಂತಿ ಹೇಳಲಿ ? ವ್ಯರ್ಥವಾಗಿ ನೀನು ಯಾರನ್ನೂ ಕೇಳದೆ ನಿರಪರಾಧಿಯಾದ ಮುನಿಶ್ರೇಷ್ಠನಾದ ವಿಶ್ವರೂಪನನ್ನುಕೊಂದು ಬಾಚಿಕೊಂಡ ಸುಖಗಳಿವು! ಆ ಪಾಪ ನಿನ್ನನ್ನು ಕಟ್ಟಿ ಕುಕ್ಕಿ ಹಿಂಸಿಸದೆ ಬಿಡುವುದುಂಟೇ ? ಯಾವ ಕೆಲಸವನ್ನಾದರೂ ಮಾಡುವ ಮೊದಲು, ಅದರ ಹಿಂದು ಮುಂದುಗಳನ್ನು ಆಲೋಚನೆ ಮಾಡಿ ನೋಡಿ ಪ್ರಾರಂಭಿಸಬೇಕು. ಇದು ರಾಜನಾದವನಿಗೆ ತುಂಬಾ ಮುಖ್ಯ. ಅವನ ತಪ್ಪಿನಿಂದ ಪ್ರಜೆಗಳೆಲ್ಲಾ ಕಷ್ಟಪಡಬೇಕಾಗುತ್ತದೆ. ಹಾಗೇ ಆಯಿತು ಈಗ. ನೀನು ಮಹಾಲೋಭಕ್ಕೆ ವಶನಾಗಿ ಬ್ರಹ್ಮಹತ್ಯಾಪಾತಕದ ಮೂಟೆಯನ್ನು ಕೊರಳಿಗೆ ಕಟ್ಟಿಕೊಂಡಿರುವೆ. ದೊಡ್ಡ ರೀತಿಯಲ್ಲಿ ಮಾಡಿದ ಪಾಪ ಪುಣ್ಯಗಳ ಫಲಿತವು ಕೂಡಲೇ ಕಂಡು ಬರುತ್ತದೆ. ಇತರರನ್ನು ವ್ಯರ್ಥವಾಗಿ ಪೀಡಿಸುವವರಿಗೆ ಸುಖವಿರಲಾರದು. ನಿನಗೆ ಈಗ ಕಷ್ಟಕಾಲವು ಪ್ರಾಪ್ತವಾಯಿತು, ಈ ವೃತ್ರನು ಮಹಾಬಲಿಷ್ಠನು. ಅವನಿಗೆ ತ್ವಷ್ಟ್ರ ವಿಶೇಷವಾದ ಆಯುಧಗಳನ್ನು ಕೂಡಾ ಕೊಟ್ಟಿದ್ದಾನೆ. ಅವುಗಳಲ್ಲಿ ಒಂದಕ್ಕೂ ಸಹ ನಿನ್ನ ವಜ್ರವು ಸಾಟಿಯಾಗಲಾರದು." ಎಂದನು ಬೃಹಸ್ಪತಿ. ಇಂದ್ರನು ಹತಾಶನಾಗಿ ಯುದ್ಧಕ್ಕೆ ಸಿದ್ಧನಾಗ ತೊಡಗಿದನು.

ದೇವೇಂದ್ರನನ್ನು ಹತಮಾಡಲು ವೃತ್ರನು ಬರುತ್ತಿದ್ದಾನೆಂದು ಕೇಳಿ, ಮುನಿಗಳೂ, ಯಕ್ಷರೂ, ದೇವತೆಗಳೂ ಗಾಬರಿಯಾಗಿ ಎಲ್ಲೆಲ್ಲಿಗೋ ಓಡತೊಡಗಿದರು. ಹಾಗೆ ಮನೆ ಬಾಗಿಲು ಬಿಟ್ಟು ಓಡಿ



ಹೋಗುವ ದೇವತೆಗಳನ್ನು ನೋಡಿ ಇಂದ್ರನು ಚಿಂತೆಯಿಂದ ತನ್ನ ಸೇವಕರನ್ನು ಕರೆದು, "ರುದ್ರರನ್ನೂ, ಆದಿತ್ಯರನ್ನೂ, ವಸುಗಳನ್ನೂ, ದಿಕ್ಪಾಲಕರನ್ನೂ ವಿಮಾನಗಳ ಮೇಲೆ ಯುದ್ಧಕ್ಕೆ ಬರಬೇಕೆಂದು ಹೇಳಿರಿ, ಬೇಗ ಬರಲಿ!" ಎಂದು ಆಜ್ಞೆ ಕಳುಹಿಸಿದನು.

ಆ ಮೇಲೆ ಇಂದ್ರನು ಬೃಹಸ್ಪತಿಯನ್ನು ಸಹಾ ತನ್ನ ಆನೆಯ ಮೇಲೆ ಕೂಡಿಸಿಕೊಂಡು ಯುದ್ಧಕ್ಕೆ ಹೊರಟನು. ಅವನ ಹಿಂದೆ ಆಯುಧಗಳೊಂದಿಗೆ ದೇವತೆಗಳ ಸೈನ್ಯವೂ ಹೊರಟಿತು. ವೃತ್ರನು ಕೂಡಾ ದಾನವ ಸೇನೆಗಳೊಂದಿಗೆ ಬಂದು ಬಿಟ್ಟನು. ಉಭಯ ಪಕ್ಷಗಳೂ ಮಾನಸಸರೋವರಕ್ಕೆ ಉತ್ತರದಲ್ಲಿದ್ದ ಪರ್ವತ ಪ್ರದೇಶದಲ್ಲಿ ಒಂದನ್ನೊಂದು ತಾಗಿದುವು.

ಆ ಪ್ರದೇಶದಲ್ಲೇ ಘೋರ ಯುದ್ಧವು ಪ್ರಾರಂಭವಾಯಿತು. ನೂರು ವರ್ಷಗಳ ವರೆಗೆ ಎಡೆಬಿಡದೆ ನಡೆಯಿತು ಆ ಯುದ್ಧ. ಅದರಿಂದಾಗಿ ಲೋಕಗಳೆಲ್ಲಾ ಭೀತಿಯಿಂದ ನಡುಗಿಕೊಂಡಿದ್ದುವು. ಆಮೇಲೆ ಮೊದಲು ವರುಣನು ಸೋತು ರಣರಂಗದಿಂದ ಓಡಿ ಹೋದನು. ಅನಂತರ ಕ್ರಮವಾಗಿ ವಾಯುಗಣಗಳೂ, ಯಮನೂ, ಕಾಂತಿವಿಹೀನನಾದ ಅಗ್ನಿಯೂ ಕೈಲಾಗದವರಾಗಿ ಓಡಿದರು. ಕಡೆಗೆ ಇಂದ್ರನೂ ಆನೆಯಿಂದ ಹಾರಿ ಓಡಿ ತಪ್ಪಿಸಿಕೊಂಡನು. ಆಮೇಲೆ ಎಲ್ಲಾ ದೇವತೆಗಳೂ ದಿಕ್ಕು ದಿಕ್ಕಿಗೆ ಓಡಿ ಹೋದರು.

ವೃತ್ರನು ಇಂದ್ರನ ಆನೆಯನ್ನು ಎಳೆದುಕೊಂಡು ತಂದೆಯ ಬಳಿಗೆ ಹೋಗಿ ನಮಸ್ಕಾರ ಮಾಡಿ, "ಅಪ್ಪಾ, ದೇವತೆಗಳೆಲ್ಲರೂ ಹೆದರಿ ಪಲಾಯನ ಮಾಡಿ ಬಿಟ್ಟರು. ಇಂದ್ರನೂ ಸಹ ಕಾಲಿನ ಬಲವನ್ನುಪಯೋಗಿಸಿ ಓಡಿ ಹೋಗುವುದನ್ನು ನೋಡಿ, ಅಂಥವನನ್ನು ಹಿಡಿಯಲು ಇಷ್ಟವಿಲ್ಲದೆ, ಅವನ ಆನೆಯನ್ನು ನಿಮಗೆ ಕಾಣಿಕೆ ತಂದಿದ್ದೇನೆ. ಇನ್ನೇನು ಮಾಡಬೇಕು ಹೇಳಿರಿ" ಎಂದನು.

ತ್ವಷ್ಟೃ ತನ್ನ ಮಗನನ್ನು ನೋಡಿ ಬಹಳ ಸಂತೃಪ್ತನಾಗಿ ಸಂತೋಷಪಡುತ್ತ, "ಅಪ್ಪಾ, ನಿನ್ನ ಪರಾಕ್ರಮವು ಎಣೆಯಿಲ್ಲದ್ದು. ಇನ್ನು ನಾನು ನಾಲ್ಕು ಮಂದಿಗಳ ಮುಂದೆ ತಲೆಯೆತ್ತಿ ತಿರುಗುವಂತಾಯಿತು. ನನ್ನ ಮನೋವೇದನೆ ಹೋಯಿತು. ಜೀವಿತವು ಫಲಿಸಿತು. ಮನಸ್ಸಿಗೆ ಸ್ಥಿಮಿತ ಉಂಟಾಯಿತು. ಇನ್ನು ನೀನು ಮಾಡಬೇಕಾದುದನ್ನು ಹೇಳುತ್ತೇನೆ, ಕೇಳು. ಓಡಿ ಹೋದ ಆ ಇಂದ್ರನನ್ನು ನಂಬಲೇಬಾರದು. ಅವನು ಮಾಡುವ ಇಂದ್ರಜಾಲಗಳನ್ನು ಲಕ್ಷ್ಯ ಮಾಡದೆ, ಬ್ರಹ್ಮನನ್ನು ಕುರಿತು ತಪಸ್ಸು ಮಾಡು. ಬ್ರಹ್ಮನಿಂದ ಸಾವಿಲ್ಲದ ಹಾಗೆ ವರವನ್ನು ಪಡೆದು, ಆ ಮೇಲೆ ಇಂದ್ರನನ್ನು ಹತ ಮಾಡಿ ಬಿಡು. ತಪಸ್ಸಿನಿಂದ ಸಾಧಿಸಲಾಗದ್ದು ಯಾವುದೂ ಇಲ್ಲ. ದೇವತೆಗಳೆಲ್ಲ ಓಡುವಷ್ಟು ಪ್ರಾಣ ಉಳಿಸಿಕೊಂಡರೆಂದರೆ, ಅವರನ್ನು ತೀರಿಸಲು ಬ್ರಹ್ಮನಿಂದ ವರಪಡೆಯಲೇ ಬೇಕು, ಇಂದ್ರನು ಕಾರಣವೇನಿಲ್ಲದೆ ನನ್ನ ಮಗನನ್ನು ಕೊಂದ ಸಂಗತಿ ನನ್ನ ಮನಸ್ಸಿನೊಳಗೆ ಉಳಿದೇ ಇದೆ.

ಆ ಇಂದ್ರನನ್ನು ಅಂತ್ಯಗೊಳಿಸದೆ ಅದು ಶಾಂತ ವಾಗದು. ಅವನು ಇಲ್ಲದಂತಾಗಲೇಬೇಕು!" ಎಂದನು.

ಹಾಗೆಯೇ ಆಗಲೆಂದು ವೃತ್ರನು ತಂದೆಯಿಂದ ಅಪ್ಪಣೆಪಡೆದು, ಮನಸ್ಸಿನೊಳಗೆ ಕ್ರೋಧಾವೇಶವನ್ನು ತುಂಬಿಕೊಂಡು, ಗಂಧಮಾದನ ಪರ್ವತದ ಮೇಲೆ ಹೋಗಿ, ಗಂಗೆಯಲ್ಲಿ ಸ್ನಾನಮಾಡಿದನು. ಅನಂತರ ದರ್ಭಾಸನದಲ್ಲಿ ಕುಳಿತು, ತಪಸ್ಸಿಗೆ ತೊಡಗಿದನು. ತಪಸ್ಸಿನಲ್ಲಿ ಸಂಪೂರ್ಣವಾಗಿ ಮುಳುಗಿ, ಯಾವ ಬಗೆಯ ಆಹಾರ ಪಾನೀಯಗಳನ್ನೂ ತೆಗೆದುಕೊಳ್ಳದೆ, ಯೋಗವನ್ನು ಅವಲಂಬಿಸಿ ದೊಡ್ಡ ದೊಡ್ಡ ಮುನಿ ಗಳಿಗೂ ಅದ್ಭುತವಾಗಿ ತೋರುವ ರೀತಿಯಲ್ಲಿ, ಬ್ರಹ್ಮನನ್ನು ಕುರಿತು ತಪಸ್ಸುಮಾಡಿದನು.

ಅದನ್ನು ನೋಡುತ್ತಾ ಇದ್ದ ಇಂದ್ರನಿಗೆ ಮತ್ತೆ ಭಯ ಹಿಡಿಯಿತು. ಅವನ ತಪಸ್ಸನ್ನು ಭಂಗಪಡಿಸಲು ಅಪ್ಸರಸಿಯರನ್ನು ಕಳುಹಿಸಿದನು. ಅವರ ಯಾವ ಚೇಷ್ಟೆಗಳೂ ವೃತ್ರನ ಮೇಲೆ ಯಾವ ಪರಿಣಾಮ ವನ್ನೂ ಮಾಡಲಿಲ್ಲ. ಅವರು ಇಂದ್ರನ ಬಳಿಗೆ ಹಿಂದಿರುಗಿ ಹೋಗಿ, ವೃತ್ರನ ತಪಸ್ಸನ್ನು ಹಾಳು ಮಾಡುವ ಕೆಲಸ ತಮ್ಮ ಶಕ್ತಿಗಳಿಗೆ ಮೀರಿದುದೆಂದು ಹೇಳಿಬಿಟ್ಟರು. ಇಂದ್ರನಿಗೆ ದಿಕ್ಕೇ ತೋಚದಂತಾಯಿತು.

ಕಡೆಗೆ ವೃತ್ರನ ಮಹಾ ತಪಸ್ಸಿಗೆ ಬ್ರಹ್ಮನು ತೃಪ್ತ ನಾಗಿ, ಅವನ ಮುಂದೆ ಬಂದು, "ವೃತ್ರಾ, ಇನ್ನು ತಪಸ್ಸನ್ನು ಸಾಕುಮಾಡು. ಬಹಳವಾಗಿ ಮೆಚ್ಚಿದೆ ನಪ್ಪಾ. ಏನು ವರ ಬೇಕೋ ಕೇಳು" ಎಂದನು.

ವೃತ್ರನು ಬ್ರಹ್ಮನಿಗೆ ಕೈಗಳನ್ನು ಜೋಡಿಸಿ, "ಮಹಾದೇವ! ನಾನು ಇದುವರೆಗೇ ಇಂದ್ರಪದವಿ ಯನ್ನು ವಶಪಡಿಸಿಕೊಂಡು ಸಂತೋಷಿಸಿದ್ದೇನೆ. ಈಗ ನಿನ್ನ ದರ್ಶನ ಭಾಗ್ಯವೂ ಲಭಿಸಿ ಇನ್ನಿಷ್ಟು ಸಂತೋಷ ವಾಗಿದೆ. ಧನ್ಯನಾದೆನು. ನಾನು ಕೇಳುವ ವರವನ್ನು ಕೊಡುವೆಯಾದರೆ, ಲೋಹಗಳಿಂದಾಗಲೀ, ಕಟ್ಟಿಗೆ ಕೋಲುಗಳಿಂದಾಗಲೀ, ಒಣಗಿದ್ದೋ, ಹಸಿಯದೋ ಆದ ಬಿದಿರುಗಳಿಂದಾಗಲೀ, ಇತರ ಆಯುಧಗಳಿಂ ದಾಗಲೀ ನನಗೆ ಮರಣ ಬಾರದಂತೆ ವರ ಕೊಡು" ಎಂದು ಬೇಡಿದನು.

ಬ್ರಹ್ಮನು ಅವನು ಕೇಳಿದಂತೆಯೇ ವರವನ್ನು ಕೊಟ್ಟು ಅಂತರ್ಧಾನನಾದನು. ವೃತ್ರನು ಪರಮಾ ನಂದದಿಂದ ತನ್ನ ತಂದೆಯ ಬಳಿಗೆ ಹೋಗಿ, ತನ್ನ ತಪಸ್ಸು ಸಿದ್ಧಿಸಿ ವರ ಪಡೆದ ಸಂಗತಿಯನ್ನು ಬಿನ್ನವಿಸಿ ಕೊಂಡು ಮುಂದಿನ ಕೆಲಸಕ್ಕೆ ಅಪ್ಪಣೆ ಕೇಳಿದನು.

"ಕಂದಾ; ನಿನಗೆ ಶುಭವಾಗಲಿ. ನಿನ್ನ ಅಣ್ಣನಾದ ವಿಶ್ವರೂಪನನ್ನು ಅಕಾರಣವಾಗಿ ಕೊಂದು, ಬ್ರಹ್ಮ ಹತ್ಯಾ ಪಾತಕವನ್ನು ಕೊರಳಿಗೆ ಕಟ್ಟಿ ಕೊಂಡಿರುವ ಆ ಮಹಾದುಷ್ಟ ಇಂದ್ರನನ್ನು ಕೊಂದುಬಿಡು" ಎಂದನು ತ್ವಷ್ಟೃ ಪ್ರಜಾಪತಿ.



# ಅತ್ತೇವರ ಕೋಣೆ

ಗಾಣದಪುರವೆಂಬ ಗ್ರಾಮದಲ್ಲಿ ರಾಜಯ್ಯನೆಂಬವನು ಧನವಂತರ ಹೊಲಗದ್ದೆಗಳನ್ನು ಗೇಣಿಗೆ ವಹಿಸಿಕೊಂಡು ತುಂಬಾ ಹಣ ಸಂಪಾದನೆ ಮಾಡಿದನು. ಆ ಮೇಲೆ ಸ್ವಂತ ಮನೆ ಕಟ್ಟಿಕೊಳ್ಳಲು ಪ್ರಾರಂಭಿಸಿದನು. ಆಗ ರಾಜಯ್ಯನ ಹೆಂಡತಿ ಸುಶೀಲೆ ಮನೆಯ ಪಕ್ಕದಲ್ಲಿ ಒಂದು ಚಿಕ್ಕ ಕೋಣೆ ಕಟ್ಟಿಸಲು ಹೇಳಿದಳು. ಅದು ಅವಳ ಅತ್ತೆಗಾಗಿಯಂತೆ. ಅದನ್ನು ತಿಳಿದರೂ ರಾಜಯ್ಯನು ಹಾಗೆಯೇ ಕಟ್ಟಿಸಿದನು.

ಆದರೆ ಮನೆ ಕಟ್ಟುವುದು ಪೂರ್ತಿಯಾಗುವ ಮೊದಲೇ ರಾಜಯ್ಯನ ತಾಯಿ ತೀರಿಹೋದಳು. ಅತ್ತೆಗಾಗಿ ಕಟ್ಟಿಸಿದ ಕೋಣೆಗೆ ಉಪಯೋಗವಿಲ್ಲದೆ ಹೋಯಿತು. ಅನಂತರ ಕೇವಲ ಗೇಣಿದಾರನಾಗಿದ್ದ ರಾಜಯ್ಯ ಸ್ವಂತ ಮನೆ ಕಟ್ಟಿಕೊಂಡದ್ದು ನೋಡಿ ಗ್ರಾಮದ ಶ್ರೀಮಂತನೊಬ್ಬನು ಅವನಿಂದ ಹೊಲಗಳನ್ನು ಕಿತ್ತುಕೊಂಡು, ಇತರರಿಂದಲೂ ಕೀಳಿಸಿಬಿಟ್ಟನು.

ಆ ಮೇಲೆ ಸಣ್ಣ ರೀತಿಯಲ್ಲಿ ಬೇಸಾಯ ಮಾಡಲು ಇಷ್ಟವಿಲ್ಲದೆ ರಾಜಯ್ಯ ತನ್ನ ಹೊಸ ಮನೆಯನ್ನು ಬಾಡಿಗೆಗೆ ಕೊಟ್ಟು, ಇನ್ನೊಂದು ಗ್ರಾಮಕ್ಕೆ ಹೋದನು.

ಕಾಲಕ್ರಮದಲ್ಲಿ ರಾಜಯ್ಯ ತೀರಿಹೋದನು. ರಾಜಯ್ಯನ ಮಗ ದೊಡ್ಡವನಾಗಿ ಮದುವೆ ಮಾಡಿಕೊಂಡನು. ಸುಶೀಲೆ ತನ್ನ ಮಗನನ್ನೂ, ಸೊಸೆಯನ್ನೂ ಕರೆದುಕೊಂಡು ಗಾಣದಪುರದ ತನ್ನ ಮನೆಗೇ ಬಂದು ಸೇರಿದಳು.

ಸುಶೀಲೆಯ ಸೊಸೆ ಮನೆಯನ್ನೆಲ್ಲಾ ನೋಡಿ, "ಅತ್ತೇ, ಮಾವಯ್ಯ ಬಹಳ ಚೆನ್ನಾಗಿ ಮನೆ ಕಟ್ಟಿದ್ದಾರೆ. ನೀವು ಆ ಪ್ರತ್ಯೇಕ ಕೋಣೆಯಲ್ಲಿ ಒಬ್ಬರೇ ಇರುವಿರೀ ಅಂತ ಆಗಲೇ ಅವರಿಗೆ ಹೇಗೆ ಗೊತ್ತಾಯಿತೋ !" ಎಂದಳು ಆಶ್ಚರ್ಯದಿಂದ.

ಸುಶೀಲೆಯ ಬಾಯಿಯಿಂದ ಮಾತೇ ಹೊರಡಲಿಲ್ಲ !





# ನಾಲ್ಕನೇ ಕಳ್ಳ

ಒಂದು ದೇಶದಲ್ಲಿ ಕಳ್ಳರ ಉಪಟಳ ಬಹಳ ಹೆಚ್ಚಾಯಿತು. ಅವರು ಮೂವರು ಕೂಡಿದ ಜತೆ ಕಳ್ಳರೆಂಬ ಸಂಗತಿಯೂ ಗೊತ್ತಾಗಿತ್ತು. ಅವರು ಪ್ರತಿ ದಿನಾ ಎಲ್ಲಿಯೋ ಒಂದು ಕಡೆಯಲ್ಲಿ ಕಳ್ಳತನಮಾಡಿ ಕೊಂಡೇ ಇದ್ದರು. ಅವರನ್ನು ಹಿಡಿಯಲು ರಕ್ಷಕ ಭಟರಿಗಾಗಲೀ, ಇತರ ಅಧಿಕಾರಿಗಳಿಗಾಗಲಿ, ಅದ ಕ್ಕಾಗಿಯೇ ಸೊಂಟಕಟ್ಟಿದ ಪ್ರಜೆಗಳಿಗಾಗಲಿ ಸಾಧ್ಯ ವಾಗಲಿಲ್ಲ. ಅವರನ್ನು ಕುರಿತು ನೆನೆಯುವುದೇ ಸಿಂಹ ಸ್ವಪ್ನದಂತಾಯಿತು ಜನರಿಗೆ.

ಕಡೆಗೆ ರಾಜನು ಯಾವ ವಿಧದಿಂದಾದರೂ ಅವರನ್ನು ಹಿಡಿಯಬೇಕೆಂದುಕೊಂಡು, ಕಳ್ಳನ ಹಾಗೆಯೇ ವೇಷ ಹಾಕಿಕೊಂಡು ರಾತ್ರಿಯಲ್ಲಿ ಅಲ್ಲಿ ಇಲ್ಲಿ ಹೊಂಚಿ ತಿರುಗ ತೊಡಗಿದನು. ಒಂದೊಂದು ದಿನ ಒಂದೊಂದು ಮೂಲೆಯಲ್ಲಿ ರಾಜನ ತಿರುಗಾಟ ಸಾಗಿತು. ಈ ವಿಧವಾಗಿ ರಾಜನು ಕೆಲವು ದಿನ ರಾತ್ರಿ ತಿರುಗುತ್ತಿದ್ದಾಗ, ಒಂದುದಿನ ಕತ್ತಲೆಯ ರಾತ್ರಿಯಲ್ಲಿ ರಾಜನು ಆ ಮೂವರು ಪ್ರಚಂಡ ಕಳ್ಳರನ್ನೂ ನೋಡಿದನು. ಅವರೂ ಕಳ್ಳನ ಹಾಗೆ ಹೊಂಚುವ ರಾಜನನ್ನು ನೋಡಿ ಅನುಮಾನ ಪಡುತ್ತ, "ಯಾರು ನೀನು? ಇಲ್ಲಿ ಏನು ಹೊಂಚು ಹಾಕಿಕೊಂಡಿರುವಿ? ನಿಜ ಹೇಳು" ಎಂದು ಕೇಳಿದರು.

"ನಾನೂ ಕಳ್ಳನೇ! ನೀವು ಮೂವರನ್ನೂ ನೋಡು ವಾಗ ಈ ದೇಶದಲ್ಲಿ ಹೆಸರು ವಾಸಿಯಾದ ಕಳ್ಳರು ನೀವೇ ಅಂತ ಕಾಣುತ್ತದೆ. ನನ್ನನ್ನೂ ನಿಮ್ಮ ಜತೆಗೆ ಸೇರಿಸಿಕೊಂಡರೆ, ನನ್ನ ಶಕ್ತಿ ಎಂತಹುದೆಂದು ನಿಮಗೆ ತೋರಿಸುತ್ತೇನೆ. ನಮ್ಮ ಬಲವೂ ಹೆಚ್ಚುತ್ತದೆ" ಎಂದನು ರಾಜ.

ಮೂವರು ಕಳ್ಳರೂ ನೆಗಾಡುತ್ತ, "ಹೌದೂ. ನಮ್ಮ ಶಕ್ತಿ ಎಂತಹುದೆಂದು ನಿನಗೇನಾದರೂ ಗೊತ್ತಿದೆಯೋ?" ಎಂದು ಕೇಳಿದರು.

"ಗೊತ್ತಿಲ್ಲ. ಹೇಳಿರಿ ಕೇಳುತ್ತೇನೆ" ಎಂದನು ರಾಜ.

"ನಾನು ಎಂತಹ ದಪ್ಪದ ಬೀಗವನ್ನಾದರೂ ಒಂದು ಹಿಡಿಗಡ್ಡಿಯಿಂದಲೇ ತೆಗೆದು ಬಿಡುತ್ತೇನೆ" ಎಂದನು ಮೊದಲನೇ ಕಳ್ಳ. "ನಾನು ಭೂಮಿಗೆ ಕಿವಿಯಾನಿಸಿ ಧನವು ಎಲ್ಲಿದೆ ಎಂಬುದನ್ನು ಕಂಡು ಹಿಡಿಯಬಲ್ಲೆ" ಎಂದನು ಎರಡನೇ ಕಳ್ಳ.

"ನಾನು ಒಂದುಸಾರಿ ಒಬ್ಬ ಮನುಷ್ಯನನ್ನು ನೋಡಿದರೆ ಅವನು ಯಾವ ಬಗೆಯ ಮಾರುವೇಷ

ವಲ್ಲಿದ್ದರೂ ಗುರುತು ಹಿಡಿದು ಬಿಡುತ್ತೇನೆ." ಎಂದನು ಮೂರನೇ ಕಳ್ಳ. ಅವರು ಹೇಳಿದುದನ್ನು ಕೇಳಿ ರಾಜನು "ಭಲೇ! ನಿಜಕ್ಕೂ ನಿಮ್ಮದು ವಿಶೇಷ ಶಕ್ತಿಗಳೇ!" ಎಂದು ಮೆಚ್ಚಿಗೆಯ ಮಾತು ಹೇಳಿದನು.

"ನಿನಗಿರುವ ಶಕ್ತಿ ಎಂಥದೆಂದು ಹೇಳು ಮತ್ತೆ" ಎಂದು ಮೂವರು ಕಳ್ಳರೂ ರಾಜನನ್ನು ಕೇಳಿದರು.

ಏನು ಹೇಳಬೇಕೆಂದು ಗೊತ್ತಾಗದೆ ರಾಜನು ಈ ವಿಧವಾಗಿ ಹೇಳಿದನು :

"ನಾನು ನನ್ನ ಹುಬ್ಬೆರಳನ್ನು ಕೆಳಗಿಳಿಸಿದೆನೆಂದರೆ ಎಂಥವನನ್ನಾದರೂ ಯಮಲೋಕಕ್ಕೆ ಕಳುಹಿಸಬಲ್ಲೆ. ತೋರು ಬೆರಳನ್ನು ಮೇಲೆ ಏರಿಸಿದೆನೆಂದರೆ ಸಾಯಲಿಕ್ಕೆ ಸಿದ್ಧರಾದವರು ಕೂಡಾ ಬದುಕಿ ಹೊರಬೀಳುತ್ತಾರೆ".

ಈ ಮಾತು ಕೇಳಿ ಮೂವರು ಕಳ್ಳರೂ, "ಭಲೆ ಭಲೆ!" ಎಂದು ಅವನ ಭುಜ ತಟ್ಟಿದರು. ತಮ್ಮೊಂದಿಗೆ ಇಷ್ಟೊಂದು ಶಕ್ತಿಯುಳ್ಳವನೂ, ಬುದ್ಧಿವಂತನಾದವನೂ ತಮ್ಮ ಜತೆಗಿರುವುದು ತಮ್ಮ ಅದೃಷ್ಟವೆಂದುಕೊಂಡರು.

"ಈ ರಾತ್ರಿ ಎಲ್ಲಿ ಕಳ್ಳತನಕ್ಕೆ ಹೋಗೋಣ?" ಎಂದು ರಾಜನು ಅವರನ್ನು ಕೇಳಿದನು.

"ನಿನ್ನ ಇಷ್ಟ! ನೀನೇ ಹೇಳು. ನೀನು ಹೇಳಿದಲ್ಲೇ ದೋಚಿಕೊಳ್ಳೋಣ. ನಮ್ಮ ಶಕ್ತಿ ಸಾಮರ್ಥ್ಯಗಳನ್ನು ಸ್ವಯಂ ನೋಡುವೆಯಂತೆ" ಎಂದರು ಕಳ್ಳರು.

"ಹಾಗಾದರೆ ರಾಜನ ಖಜಾನೆಯನ್ನೇ ಕೊಳ್ಳೆ ಹೊಡೆಯೋಣ" ಎಂದನು ರಾಜ.

ನಾಲ್ವರೂ ಕೂಡಿ ರಾಜನ ಅರಮನೆಯ ಕಡೆಗೆ ಹೊರಟರು. ಯಾವ ಪಹರೆಯವರ ಕಣ್ಣಿಗೂ ಬೀಳದೆ ಕೋಟೆಯೊಳಗೆ ಪ್ರವೇಶಮಾಡಿದರು. ಎರಡನೇ ಕಳ್ಳ ನೆಲಕ್ಕೆ ಕಿವಿಯಾನಿಸಿ, "ಖಾಜಾನೆ ಈಚೆಯ ದಿಕ್ಕಿನಲ್ಲಿದೆ. ಜಾಗ್ರತೆಯಿಂದ ನಡೆಯಿರಿ" ಎಂದನು.

ನಾಲ್ವರೂ ಆ ಕಡೆಗೆ ಹೋದರು. ಖಜಾನೆಯ ಬಾಗಿಲಿಗೆ ದೊಡ್ಡ ಬೀಗ ಹಾಕಲ್ಪಟ್ಟಿತ್ತು. ಅದನ್ನು ಮೊದಲನೇ ಕಳ್ಳ ಕ್ಷಣಮಾತ್ರದಲ್ಲಿ ಕಳಚಿಬಿಟ್ಟನು. ಮೂವರು ಕಳ್ಳರೂ ಒಳಗೆ ಹೊಕ್ಕರು. ಈ ಸಮಯದಲ್ಲಿ ರಾಜನು ಅವರಿಗೆ ತಿಳಿಯದ



ಹಾಗೆ ಕತ್ತಲೆಯಲ್ಲಿ ಮರೆಯಾಗಿ, ತನ್ನ ಭಟರನ್ನು ಕಳುಹಿಸಿದನು. ಮೂವರು ಕಳ್ಳರೂ ಕದ್ದ ಸೊತ್ತಿನೊಂದಿಗೆ ಸಿಕ್ಕಿಬಿದ್ದರು.

ಮಾರಣೇದಿನ ರಾಜನು ದರಬಾರು ಕೊಡಿಸಿದನು. ಮೂವರು ಕಳ್ಳರನ್ನೂ ವಿಚಾರಣೆಗೆ ತಂದು ನಿಲ್ಲಿಸಿದರು. ಸಿಂಹಾಸನದಲ್ಲಿ ಕುಳಿತಿರುವ ರಾಜನನ್ನು ನೋಡಿದ ಕೂಡಲೇ ಮೂರನೇ ಕಳ್ಳ ತನ್ನ ಜತೆಗಾರರೊಂದಿಗೆ, "ಇವನೇ ನಿನ್ನೆ ರಾತ್ರಿ ನಮ್ಮೊಂದಿಗೆ ಕಳ್ಳತನಕ್ಕೆ ಬಂದ ಹೊಸ ಮನುಷ್ಯ!" ಎಂದು ಹೇಳಿದನು.

ವಿಚಾರಣೆ ಮುಗಿದ ಕೂಡಲೇ ರಾಜನು ತನ್ನ ಬಲಗೈಯ ಹೆಬ್ಬೆರಳನ್ನು ಕೆಳಕ್ಕಿಳಿಸಿದನು. ಮೂವರು ಕಳ್ಳರಿಗೂ ಮರಣ ಶಿಕ್ಷೆ ವಿಧಿಸಲಾಗಿದೆ ಎಂದು ಮಂತ್ರಿ ತೀರ್ಪು ಹೇಳಿದನು.

ಮಾರನೇ ದಿನ ಆ ಮೂವರು ಕಳ್ಳರನ್ನೂ ಗಲ್ಲಿನ ಕಂಬದ ಕಡೆಗೆ ಕರೆದೊಯ್ದರು. ಅವರನ್ನು ಗಲ್ಲಿಗೇರಿಸುವುದಕ್ಕೆ ಮೊದಲು ಅಧಿಕಾರಿಯೊಬ್ಬನು ಬಂದು ಅವರನ್ನು ಕುರಿತು, "ಹೇಳಿರಿ, ನಿಮ್ಮ ಕೊನೆಯ ಕೋರಿಕೆ ಏನಾದರೂ ಇದೆಯೆ? ಹೇಳಿರಿ" ಎಂದು ಕೇಳಿದನು.

"ನಮಗೆ ಮಹಾರಾಜರ ಹತ್ತಿರ ಒಂದು ಪ್ರಶ್ನೆ ಕೇಳಬೇಕು. ಅದೇ ನಾವು ಮೂವರಿಗೂ ಇರುವ ಒಂದೇ ಒಂದು ಕೊನೇ ಕೋರಿಕೆ" ಎಂದರು.

ಅದನ್ನು ತಿಳಿದು ಕೂಡಲೇ ರಾಜನು ಅಲ್ಲಿಗೆ ಬಂದು, "ನೀವು ನನ್ನ ಹತ್ತಿರ ಒಂದು ಪ್ರಶ್ನೆ ಕೇಳಬೇಕೆಂದಿರಂತೆ, ಏನದು? ಕೇಳಿರಿ" ಎಂದನು.

"ಅದು ಮತ್ತೇನಿಲ್ಲ ಮಹಾಪ್ರಭೂ. ನಮ್ಮ ಶಕ್ತಿಗಳನ್ನು ನಿಮಗೆ ಪ್ರದರ್ಶಿಸಿದ್ದೇವೆ. ನೀವು ಹೇಳಿದ ನಿಮಗಿರುವ ಎರಡು ಶಕ್ತಿಗಳಲ್ಲಿ ಒಂದನ್ನು ಮಾತ್ರವೇ ಪ್ರದರ್ಶನ ಮಾಡಿದಿರಿ. ಎರಡನೆಯದನ್ನು ಕೂಡಾ ನೋಡಿ ಸಂತೋಷಪಡಬೇಕೆಂಬುದು ನಮ್ಮ ಕೊನೆಯ ಆಶೆ" ಎಂದನು ಮೂರನೇ ಕಳ್ಳ.

ರಾಜನು ಮುಗುಳು ನಕ್ಕು ತನ್ನ ತೋರು ಬೆರಳನ್ನು ಮೇಲಕ್ಕೆ ಎತ್ತಿದನು. ಮರುಕ್ಷಣವೇ ರಾಜಭಟರು ಓಡಿ ಬಂದು ಮೂವರು ಕಳ್ಳರ ಕಟ್ಟುಗಳನ್ನೂ ಬಿಡಿಸಿ ಗಲ್ಲಿನ ಕಂಬವಿರುವ ಪೀಠದಿಂದ ಕೆಳಕ್ಕಿಳಿಸಿದರು.

"ನಿಮ್ಮ ಕೊನೆಯ ಕೋರಿಕೆ ನಿಜಕ್ಕೂ ಕೊನೆಯದಾಗಿರಲಿ" ಎಂದನು ಅವರನ್ನು ನೋಡಿ ರಾಜ. ಅವರು ಕಳ್ಳತನಗಳನ್ನು ಬಿಟ್ಟೆವೆಂದು ಪ್ರಮಾಣ ಮಾಡಿದರು. ಅವರ ಸೊತ್ತುಗಳನ್ನು ತರಿಸಿ ಕಳವು ಹೋದವರಿಗೆಲ್ಲಾ ಕೊಡಿಸಲಾಯಿತು. ರಾಜನು ಆ ಕಳ್ಳರಿಗೆ ಯೋಗ್ಯವಾದ ಉದ್ಯೋಗವನ್ನು ಕೊಟ್ಟು, ತನ್ನ ಆಸ್ಥಾನದಲ್ಲೇ ಇರಿಸಿಕೊಂಡನು. ಅವರು ತುಂಬಾ ರಾಜಭಕ್ತಿಯುಳ್ಳವರಾಗಿ ಕಡೆತನಕವೂ ಯೋಗ್ಯರಾಗಿದ್ದರು.



# ಬುದ್ಧಿಗೆ ಪೆಟ್ಟು

**ಬಾ**ಲಕೃಷ್ಣಯ್ಯ ಎಂಬವನು ತನ್ನ ದೊಡ್ಡ ಮಗನಿಗೆ ಹತ್ತು ಸಾವಿರ ವರದಕ್ಷಿಣೆ ಪಡೆದುಕೊಂಡು ಚಂದ್ರಣ್ಣನ ಹಿರಿಯ ಮಗಳನ್ನು ಮದುವೆ ಮಾಡಿಸಿದನು. ಈ ಮದುವೆಯಾಗಿ ಹತ್ತು ವರ್ಷಗಳ ಮೇಲೆ ಚಂದ್ರಣ್ಣ ತನ್ನ ಚಿಕ್ಕ ಮಗಳಿಗೆ ಹದಿನೈದು ಸಾವಿರ ವರದಕ್ಷಿಣೆ ಕೊಟ್ಟು ಮದುವೆ ಮಾಡಿದನು.

ಅದನ್ನು ನೋಡಿ ಬಾಲಕೃಷ್ಣಯ್ಯ ಚಂದ್ರಣ್ಣನೊಂದಿಗೆ, "ನನ್ನ ಮಗ ಯಾವುದರಲ್ಲಿ ಕಡಿಮೆಯಾದ? ಅವನಿಗೂ ಇನ್ನೊಂದು ಐದು ಸಾವಿರ ಕೊಟ್ಟುಬಿಡಿ. ಇಲ್ಲದಿದ್ದರೆ ನಿಮ್ಮ ಮಗಳನ್ನು ನಿಮ್ಮ ಮನೆಗೇ ಕರೆದು ಕೊಂಡು ಹೋಗಿ!" ಎಂದನು.

ಚಂದ್ರಣ್ಣ ಏನು ಮಾಡಲೂ ತೋರದೆ ಗ್ರಾಮಾಧಿಕಾರಿಯೊಂದಿಗೆ ಮೊರೆಯಿಟ್ಟನು.

ಗ್ರಾಮಾಧಿಕಾರಿ ಬಾಲಕೃಷ್ಣಯ್ಯನನ್ನು ಕರೆಯಿಸಿ, "ಇನ್ನೂ ಐದು ಸಾವಿರ ರೂಪಾಯಿ ಬೇಕೆಂದು ಕೇಳಿದಿರಂತೆ? ನಿಮ್ಮ ಮಗನಿಗೆ ಹತ್ತು ವರ್ಷಗಳ ಹಿಂದೆ ವರದಕ್ಷಿಣೆ ಕೊಟ್ಟ ಹತ್ತು ಸಾವಿರವು ಬಡ್ಡಿಯೊಂದಿಗೆ ಈಗ ಇಪ್ಪತ್ತೆರಡು ಸಾವಿರ ಆಗುತ್ತದೆ. ನೀವೇ ಚಂದ್ರಣ್ಣನಿಗೆ ಏಳು ಸಾವಿರ ಬಾಕೀ ಕೊಡಬೇಕು, ಮೊದಲು ಅದನ್ನು ಕೊಡಿರಿ. ಗೊತ್ತಾಯಿತೆ?" ಎಂದನು.

ಆ ಮಾತಿನ ಪೆಟ್ಟು ಬಾಲಕೃಷ್ಣಯ್ಯನ ಬುದ್ಧಿಗೆ ತಾಗಿ. ತಲೆ ತಗ್ಗಿಸಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೦ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







V. Krishna Rao — Bishan Maheshwari

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಮಾರ್ಚಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬.

---

### ಜನವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: **ಬೀಸಿ ಒಗೀ ಚೆಂಡಾ!**

ಎರಡನೇ ಫೋಟೋ: **ಒಡೆದೋದೀತೋ ಪುಂಡಾ!**

ಕಳುಹಿಸಿದವರು: **ಹೆಚ್. ಸುರೇಶ,**

93 A, 4 ನೇ ಮೈನ್, 12 ನೇ ಕ್ರಾಸ್, 560 003

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.

**Statement about ownership of CHANDAMAMA (Kannada)**
**Rule 8 (Form VI), Newspapers (Central) Rules, 1956**

1. *Place of Publication* ... 'CHANDAMAMA BUILDINGS' 188, Arcot Road Vadapalani, Madras-600 026
2. *Periodicity of Publication* ... MONTHLY 1st of each calendar month
3. *Printer's Name* ... B. V. REDDI
   *Nationality* ... INDIAN
   *Address* ... Prasad Process Pvt Limited 188, Arcot Road Vadapalani, Madras-600 026
4. *Publisher's Name* ... B. VISWANATHA REDDI
   *Nationality* ... INDIAN
   *Address* ... CHANDAMAMA PUBLICATIONS 188, Arcot Road Vadapalani, Madras-600 026
5. *Editor's Name* ... NAGI REDDI
   *Nationality* ... INDIAN
   *Address* ... 'CHANDAMAMA BUILDINGS' 188, Arcot Road Vadapalani, Madras-600 026
6. *Name & Address of individuals who own the paper* ... CHANDAMAMA CHILDREN'S TRUST FUND
   BENEFICIERIES:
   1. B. V. HARISH
   2. B. V. NARESH
   3. B. V. L. ARATI
   4. B. L. NIRUPAMA
   5. B. V. SANJAY
   6. B. V. SHARATH
   7. B. L. SUNANDA
   8. B. N. RAJESH
   9. B. ARCHANA
   10. B. N. V. VISHNU PRASAD
   11. B. L. ARADHANA
   12. B. NAGI REDDI

All Minors—by Trustee
M. UTTAMA REDDI, 9/3, V.O.C. Street, Madras-600 024.

I, B. Viswanatha Reddi, hereby declare that the particulars given above are true to the best of my knowledge and belief.

1st March 1980

B. VISWANATHA REDDI
*Signature of the Publisher*

# ಚಿಕ್ಕ ಮಕ್ಕಳು
## ಪ್ರೀತಿ ಬಯಸಿವೆ, ಪ್ರೀತಿ ಪಡೆಯುತ್ತ ಮತ್ತೆ ಬೆಳೆದಿವೆ




ಪ್ರೀತಿಯ ಇನ್ನೊಂದು ಹೆಸರು

**ಪಾರ್ಲೆ ಗ್ಲುಕೋ**

**ಅಪೂರ್ವವಾದ ರುಚಿ**

**ತುಂಬಿ ತುಳುಕುವ ಶಕ್ತಿ**

ಹಾಲು, ಗೋಧಿ, ಸಕ್ಕರೆ ಮತ್ತು ಗ್ಲುಕೋಸ್‌ಗಳ
ಹಿತಕಾರೀ ಸತ್ವಗಳಿಂದ ಸಮೃದ್ಧವಾಗಿವೆ.



ವರ್ಲ್ಡ್ ಸಿಲೆಕ್ಷನ್
ಅವಾರ್ಡಿನ ವಿಜಯಿ

ಪಾರ್ಲೆ
ಗ್ಲುಕೋ
ಭಾರತದ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್

everest/79/PP/159-kn